# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ



Photo by P. K. Patel



ಬಹುಮಾನ
ಪಡೆದ ಶೀರ್ಷಿಕೆ

ನನ್ನೊಡನೇ ನಲಿಯುವೆ

ಕಳಿಸಿದವರು:
ಜಿ. ಎಸ್. ಕೃಷ್ಣನ್




ತಾರಾಗಣ...

**ಪಂಡರಿಬಾಯ್**
**ಮೈನಾವತಿ** ಮತ್ತು ಇತರರು...

ಪಾಂಡುರಂಗ ಪ್ರೊಡಕ್ಷನ್ಸ್ ರವರ

# ಸಂತ್ ಸಖೂ

ನಿರ್ದೇಶನ :.. ಕೃಷ್ಣನ್ ಪಂಜು  ...ಕನ್ನಡ...

a **TALLAM** *Release*

ಫೌಂಟೆನ್ ಪೆನ್ ಮತ್ತು
ಶಾಯಿಯ ಬಾಬ್ತು
ವಿಶ್ವವಿಖ್ಯಾತವಾದ
ಹೆಸರು

## ಪೈಲಟ್

ಈಗ ಪುನಃ
ಇಂಡಿಯಾ ಪೂರಾ
ಎಲ್ಲೆಲ್ಲೂ
ದೊರಕುತ್ತದೆ

*

ಗ್ಯಾರಂಟೀ
ದರ್ಜೆ

MANUFACTURED BY:
**THE PILOT PEN CO. (INDIA) LTD.**
CATHOLIC CENTRE, MADRAS-1.





## ಡೋಂಗರೇ ಬಾಲಾಮೃತ

✣

ಇದು ಸೊರಗಿ ಕಡ್ಡಿಯಂತಾದ ಚಿಕ್ಕ ಮಕ್ಕಳಿಗೆ ಆರೋಗ್ಯವನ್ನೂ ಪುಷ್ಟಿಯನ್ನೂ ಬಲವನ್ನೂ ಕೊಡುತ್ತದೆ. ಇದರ ಸೇವನೆಯಿಂದ ಮಕ್ಕಳ ಹಲ್ಲುಗಳು ಕಷ್ಟವಿಲ್ಲದೆ ಹೊರಬೀಳಲು ಸಹಾಯವಾಗುತ್ತದೆ.



ಗ್ರೈಪ್ ಸಿರಪ್ - ಐ. ಟಿ. ಎಲ್.

ನಿಮ್ಮ ಮುದ್ದು ಕಂದನ ಅಜೀರ್ಣ ವ್ಯಾಧಿಗಳನ್ನು ತಡೆದು ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು:

**ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್ ಟೆಸ್ಟಿಂಗ್ ಲ್ಯಾಬೋರಟರಿ, ಲಿ.,**
**ಮಲ್ಲೇಶ್ವರಂ :: ಬೆಂಗಳೂರು-3**

ಎಲ್ಲಾ ಪ್ರಮುಖ ವ್ಯಾಪಾರಿಗಳಲ್ಲೂ
ದೊರೆಯುತ್ತದೆ



ವ್ಯಾಪಾರದ ಗುರುತು




## ಗ್ರೈಪ್ ಸಿರಪ್

ಕನ್ನಡ ಸಿನಿಮಾ ಜಗತ್ತಿನಲ್ಲಿ ಒಂದು ಹೊಸ ಧ್ವನಿ




ಪದ್ಮಿನಿ ಪಿಕ್ಚರ್ಸ್

# ಮೊದಲ ತೇದಿ

(ಕನ್ನಡ)

ಚಿಂತನೆಯನ್ನು ಕೆರಳಿಸುವ ಚಿತ್ರ
[ತಯಾರಾಗುತ್ತಿದೆ]

ಡೈರೆಕ್ಷನ್ ಪ.ನೀಲಕಂಠನ್
ಕಥೆ ದಾದಾ ಮಿರಾಸಿ
ಸಂಭಾಷಣೆ-ಹಾಡುಗಳು ಚಿ.ಸದಾಶಿವಯ್ಯ

ಬಿ.ಆರ್.ಪಂತುಲು, ಎಂ.ವಿ.ರಾಜಮ್ಮ
ಡಿಕ್ಕಿಮಾಧವರಾವ್, ಸುಮತಿ, ರವಿ, ಸುಜಾತಾ

GHRao

ಪದ್ಮಿನಿ ಪಿಕ್ಚರ್ಸ್ · ಮದರಾಸ್ · 4 ·

# "ನನ್ನ ಚರ್ಮಕ್ಕೆ ಪರಿಶುದ್ಧವಾದ ಸಾಬೂನು ಅಗತ್ಯ!"



ಮೈಸೂರು ಸ್ಯಾಂಡಲ್ ಸೋಪಿನಲ್ಲಿರುವ ಪರಿಮಳ ಮತ್ತು ಔಷಧಗುಣಗಳು ಮಗುವನ್ನು ಶುಭ್ರವಾಗಿ ತೊಳೆಯುವುದೇ ಅಲ್ಲದೆ ಮಗುವಿನ ಎಳೆಯ ಚರ್ಮ ಕು ಣ್ಣಾ ಗ ದ ೦ ತೆ ಯೂ ನೋ ಯ ದ ೦ ತೆ ಯೂ ಕಾಪಾಡುತ್ತದೆ.

'my skin needs a pure soap!"

## ಮೈ ಸೂ ರು ಸ್ಯಾ ೦ ಡ ಲ್ ಸೋ ಪ್



★

ಗವರ್ನಮೆಂಟ್ ಸೋಪ್ ಫ್ಯಾಕ್ಟರಿ

ಬೆ ೦ ಗ ಳೂ ರು

( ಐ. ಎಸ್. ಟಿ. ಎಮ್. ಎ. ಸದಸ್ಯರು )



# ಜೀವನೋಪಾಯಕ್ಕೆ ಉಪಕರಿಸುವ ಪುಸ್ತಕಗಳು

## ಎಲೆಕ್ಟ್ರಿಕ್ ಮತ್ತು ರೇಡಿಯೋ ಗೈಡ್ (2 ಭಾಗಗಳು)

ರೂ. *15/–*ಕ್ಕೆ ನಿಮಗೆ ನೀವೇ ರೇಡಿಯೋ ನಿರ್ಮಿಸಿಕೊಳ್ಳಿರಿ. ಇದಕ್ಕೆ ವಿದ್ಯುತ್ತಿನ ಅಗತ್ಯವಿಲ್ಲ. ರೇಡಿಯೋ ದುರಸ್ತಿ; ವಯರಿಂಗ್, ಇತರ ಎಲೆಕ್ಟ್ರಿಕಲ್ ಮೆಕಾನಿಜಮ್ ಕಲಿತುಕೊಂಡು ಉತ್ತಮ ಮೆಕಾನಿಕ್ ಆಗಲಿಕ್ಕೆ ರೂ. *4/–*

ಹಿಂದೀ ಸ್ವಯಂಶಿಕ್ಷಕ:–ಈ ದಿನಗಳಲ್ಲಿ ಹಿಂದಿಯೇ ರಾಜಭಾಷೆ. ಈ ಪುಸ್ತಕದ ಸಹಾಯದಿಂದ ಉಪಾಧ್ಯಾಯರ ಅಗತ್ಯವಿಲ್ಲದೆಯೇ ಶೀಘ್ರವೂ ಸುಲಭವೂ ಆಗಿ ಹಿಂದಿ ಕಲಿತುಕೊಳ್ಳಬಹುದು. ಬೆಲೆ ರೂ *3/–*: ಹೊಲಿಗೆ, ಕಟಿಂಗುಗಳು (ಚಿತ್ರಗಳೊಂದಿಗೆ) ರೂ. *4/–*; ಅಚ್ಚಿಸುವ ಮತ್ತು ಬರೆಯುವ ಶಾಯಿಗಳ ತಯಾರಿಕೆ ರೂ. *3/–*; ಗಡಿಯಾರ ಮತ್ತು ವಾಚುಗಳ ರಿಪೇರಿ ರೂ. *3/–*; ಎಂಬ್ರಾಯ್ಡರೀ ಡಿಜೈನುಗಳ ಪುಸ್ತಕ (ನೂರಾರು ಡಿಜೈನುಗಳುಳ್ಳದ್ದು) ರೂ. *3/–*; ಫೋಟೋಗ್ರಫೀ ರೂ. *3/–*; ಬಂಗಾಳೀ ಮಿಠಾಯಿಗಳ ತಯಾರಿಕೆ ರೂ. *3/–*; ಬ್ಯಾಟರೀ ತಯಾರಿಸುವ ಕ್ರಮ ರೂ. *3/–*; ಸೋಪುಗಳ ತಯಾರಿಕೆ ರೂ. *3/–*; ಅತ್ತರುಗಳ ತಯಾರಿಕೆ ರೂ. *3/–*; ಸೆಂಟು, ಎಸ್ಸೆನ್ಸುಗಳ ತಯಾರಿಕೆ ರೂ. *3/–*; ಜೀವನದಲ್ಲಿ ಜಯಿಸುವ ಗುಟ್ಟು, ಅಭಿವೃದ್ಧಿ ರೂ. *2/8*; ಮಿತ್ರರನ್ನು ಪಡೆಯುವುದು, ಜನರನ್ನು ಆಕರ್ಷಿಸುವುದು ರೂ. *4/4*; ವಿಜಯಜೀವನ ರೂ. *2,8*; ಮನಸ್ಸಿನ ಶಕ್ತಿಯನ್ನು ಸಾಧಿಸುವುದು ರೂ. *3/8*; ನಾಯಕನಾಗುವಿಕೆ ರೂ. *3/–*; ಸಭೆಯಲ್ಲಿ ಭಾಷಣಮಾಡುವ ಕ್ರಮ ರೂ. *3/–*; ಜೀವನ ಕಲೆ ರೂ. *3/7*; ಗಾಯನ, ನೃತ್ಯಕಲೆಗಳು ರೂ. *4 /–*. ಪ್ರತಿಆರ್ಡರಿಗೂ ವಿ. ಪಿ. ಪಿ. ಚಾರ್ಜು *0–12–0* ಪ್ರತ್ಯೇಕ.

ಪ ತ್ರ ವ್ಯ ವ ಹಾ ರ ಇ೦ಗ್ಲೀಷಿನಲ್ಲಿಯೇ ಮಾ ಡ ಬೇ ಕು.

**SULEKHA BOOK DEPOT (C. M.)**

Mahavirganj :: ALIGARH (U. P.) INDIA

ಶೀಘ್ರದಲ್ಲಿಯೇ ಬರುತ್ತದೆ !





ಸಂಧ್ಯಾ – ವಿದ್ಯಾ – ಕೌಶಿಕ
ಅಶ್ವಥ್ – ಮಾಸ್ಟರ್ ಜಯ
ಕುಮಾರ್ – ಎನ್. ಎಸ್. ಕೃಷ್ಣನ್
– ಟಿ. ಎ. ಮಧುರಂ
ಪೊನ್ ವಯಲ್ ಸುಶೀಲ

ಕಥೆ – ಸಂಭಾಷಣೆ
ಅ. ನ. ಕೃಷ್ಣರಾಯ

ಲೋಕೇಶ್ವರಿ ಪಿಕ್ಚರ್ಸ್ ರವರ

# ಸ್ತ್ರೀರತ್ನ

ಡೈರೆಕ್ಟರ್... ಕೆ. ಸುಬ್ರಹ್ಮಣ್ಯಂ, ಬಿ.ಎ., ಬಿ.ಎಲ್.

ಸ್ಟುಡಿಯೋ... ಪ್ರೀಮಿಯರ್ ಸ್ಟುಡಿಯೋಸ್.. ಮೈಸೂರು

DAS

: ವಿವರಗಳಿಗೆ:

ಶ್ರೀ ರಾಘವೇಂದ್ರ ಪಿಕ್ಚರ್ಸ್

ಗಾಂಧಿನಗರ :: ಬೆಂಗಳೂರು – 2.




**SWEETS**

**ನಿಮ್ಮ ಸವಿ ಸುಖಕ್ಕೆ**

**ನ್ಯೂಟ್ರೈನ್**
**ಶ್ರೇಷ್ಠತೆಯ**
**ಮಿಠಾಯಿಗಳು**

ದಿ ನ್ಯೂಟ್ರೈನ್ ಕನ್ಫೆಕ್ಷನರೀ ಕಂ. ಲಿಡ್.
ಚಿತ್ತೂರು - ಆಂಧ್ರ.

ಬೆಂಗಳೂರು ಆಫೀಸ್:
6, ಐದನೇ ಮ್ಯೆನ್‌ರೋಡು, ಚಾಮರಾಜಪೇಟೆ.

ಈ ಕೆಳಗಿನ ಸ್ಥಳಗಳಲ್ಲಿ
ಏಜೆಂಟರು ಬೇಕು

ಬಾಗೇಪಲ್ಲಿ
ಕುಮಟಾ
ಮುನಿರಾಬಾದ್
ಮತ್ತು
ತರೀಕೆರೆ

ನಗದು ಹಣ ಡಿಪಾಜಿಟ್ ಕಟ್ಟ
ಬಲ್ಲವರು ಮಾತ್ರ ವಿಚಾರಿಸಿ:

ದಿ ಸರ್ಕುಲೇಷನ್ ಮ್ಯಾನೇಜರ್
ಚಂದಮಾಮ, ಮದರಾಸು - 26.



*ನಿಮ್ಮ ಬಟ್ಟೆಗಳ ಶುಭ್ರತೆಗೆ*
*ಪ್ರತೀಯೋರ್ವ ಗೃಹಿಣಿಯ ಮನ್ನಣೆಗೆ*
*ಪಾತ್ರವಾಗಿರುವ*

# ಕಸ್ತೂರಿ
## ಬಾರ್ ಸೋಪು

*ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್.* ಹೆಡ್ ಆಫೀಸು: ಮಂಗಳೂರು
ಬ್ರಾಂಚ್: ತುಮಕೂರು

# ಮಲ್ಟೀಕಲರ್

## ಫೋಟೋ ಆಫ್‌ಸೆಟ್ ಪ್ರಿಂಟಿಂಗ್

ಮತ್ತು

## ಪ್ರೋಸೆಸ್ ಬ್ಲಾಕುಗಳ ತಯಾರಿಕೆಯಲ್ಲಿ

ಅತ್ಯುನ್ನತ ಸ್ಥಾನವನ್ನು ನೆಲೆಗೊಳಿಸುವುದೇ ಯಾವಾಗಲೂ
ನಮ್ಮ ಮುಖ್ಯಧ್ಯೇಯವೆಂದು ಭರವಸೆ ಕೊಡುತ್ತೇವೆ.



ನಮ್ಮ ಭಾರತ ದೇಶದ ಯಾವ ಸಂಸ್ಥೆಯೂ ಇದುವರೆಗೆ ತಿಳಿಯದ 30"×40"
ಅಂಗುಲಗಳ ಬೃಹ್ಮಾಂಡವಾದ ಕ್ಯಾಮೆರಾವನ್ನೂ, ಹೊಚ್ಚಹೊಸ ಆಧುನಿಕ
ಯಂತ್ರೋಪಕರಣಗಳನ್ನೂ ನೆಲೆಗೊಳಿಸಿದ್ದೇವೆ. ನಿಪುಣ ಅನುಭವಶಾಲಿಗಳಾದ
ನಮ್ಮ ಟೆಕ್ನಿಷಿಯನ್‌ಗಳೂ, ಆರ್ಟಿಸ್ಟುಗಳೂ

ನಿಮ್ಮ ಅಸಲು ಕೃತಿಗೆ ಸರಿಯಾದ ಪೋಸ್ಟರುಗಳನ್ನೂ
ಕ್ಯಾಲೆಂಡರುಗಳನ್ನೂ ತಯಾರಿಸಿ ಕೊಡಬಲ್ಲರು

---

# ಪ್ರಸಾದ್ ಪ್ರೋಸೆಸ್

ಚಂದಮಾಮ ಬಿಲ್ಡಿಂಗ್ಸ್, ಮದರಾಸು - 26

ಯಾವಾಗಲೂ
'ಚಾಂಪಿಯನ್'ನ್ನೇ
ಕೊಂಡುಕೊಳ್ಳಿ

ಪ್ರತಿಯೊಂದು
ಕಡೆಯಲ್ಲೂ
ದೊರಕುವ
ಗುಣವುಳ್ಳ
ಫೌಂಟೆನ್
ಪೆನ್

ಬೆಲೆ
ರೂ. 3/8




ಗುಜರಾತ್ ಇಂಡಸ್ಟ್ರೀಸ್, ಬೊಂಬಾಯಿ-2.

## ಈಗ ಸಿದ್ಧವಾಗಿವೆ

ದೇವತಾ ಚಿತ್ರಗಳಿಂದ, ಪ್ರಕೃತಿ ದೃಶ್ಯಗಳಿಂದ ಮತ್ತು ಸುಪ್ರಸಿದ್ಧ ದಕ್ಷಿಣಭಾರತ ಚಲನಚಿತ್ರ ತಾರೆಯರ ಫೋಟೋಗಳಿಂದ, ಅಂದವಾದ ಬಣ್ಣಗಳಲ್ಲಿ ಮುದ್ರಿಸಲ್ಪಟ್ಟ, ಕಲಾವಂತವೂ ಆಕರ್ಷಣೀಯವೂ ಆದ **ವಿನಾಯಗಂ**ರವರ

## 1955 ರ ಕ್ಯಾಲೆಂಡರುಗಳು

ಬೆಲೆ: ನೂರು ಪ್ರತಿಗಳಿಗೆ ರೂ. *18/-*
ಡಜನು ರೂ. *2/4*

**ಈ ವರ್ಷದ ಪ್ರತ್ಯೇಕತೆ**

ಫೋಟೋ ಆಫ್‌ಸೆಟ್‌ನಿಂದ ತಯಾರಾದ

**ವೈಜಯಂತಿಮಾಲ**

ಮಲ್ಟೀಕಲರ್ ಫೋಟೋವಿನ ಕ್ಯಾಲೆಂಡರು
ಬೆಲೆ: *8* ಆಣೆ. ಅಂಚೆ ಹಾಸಲು ಪ್ರತ್ಯೇಕ.

: ವಿವರಗಳಿಗೆ:

**ವಿನಾಯಗಂ ಅಂಡ್ ಕೊ.,**
ಚೂಳೈ :: ಮದರಾಸು – 7.

## ಜಾತಕ ಕಥೆಗಳು

(ಬುದ್ಧನ ಪೂರ್ವಜನ್ಮಗಳು)



'ಚಂದಮಾಮ'ದಲ್ಲಿ ಪ್ರಕಟ
ವಾದ ಪ್ರಖ್ಯಾತವಾದ
ನೀತಿ ಕಥೆಗಳು,
ಸುಂದರವಾದ ಪುಸ್ತಕರೂಪದಲ್ಲಿ
ಹೊರಡುತ್ತವೆ.



ಬೆಲೆ **0-12-0**

ಏಜೆಂಟರಿಗೆ ಮಾಮೂಲು
ಕಮಿಷನ್ ಕೊಡಲಾಗುತ್ತದೆ.

**ಆರ್ಡರನ್ನು ಅಡ್ವಾನ್ಸಿನೊಂದಿಗೆ
ಕಳುಹಿಸಿರಿ.**



ಚಂದಮಾಮ ಪಬ್ಲಿಕೇಷನ್ಸ್
(ಪುಸ್ತಕ ವಿಭಾಗ)
ಮದರಾಸು – 26.

ಶೀಘ್ರದಲ್ಲಿಯೇ ನಿರೀಕ್ಷಿಸಿ



ಶ್ರೀ ರಾಜರಾಜೇಶ್ವರಿಯವರ

# ಸತೀ ಸಕ್ಕುಬಾಯಿ [ತೆಲುಗು]

—: ತಾರಾಗಣ :—

ಕನ್ನಾಂಬ - ಎಸ್. ವರಲಕ್ಷ್ಮಿ - ಕನಕಂ
ರೇಲಂಗಿ - ಶಿವರಾವ್ - ಸಿ. ಎಸ್. ಆರ್. - ಪಿ. ಸೂರಿಬಾಬು
ಕೆ. ರಘುರಾಮಯ್ಯ - ವಂಗರ ವೆಂಕಟಸುಬ್ಬಯ್ಯ

ಸ್ಟುಡಿಯೋ
ಜೆಮಿನಿ

ನಿರ್ಮಾಪಕ - ನಿರ್ದೇಶಕ
ಕೆ. ಬಿ. ನಾಗಭೂಷಣಂ

ಭಕ್ತಿಯೋಗದ ದ್ವಾರಾ ಪಾಂಡುರಂಗನ ದಿವ್ಯ ಮಂಗಳಮೂರ್ತಿಯನ್ನು ಸಂದರ್ಶಿಸಿ ಯುಗಯುಗಾಂತರದವರಿಗೆ ಅಮರಸಂದೇಶವನ್ನಿತ್ತ ಆದರ್ಶ ರಮಣೀಮಣಿಯ ಸ್ವಾರಸ್ಯ ಕಥಾಚಿತ್ರ



**a VIJAYA TALKIE Release**

ಶೀಘ್ರದಲ್ಲಿಯೇ ನಿರೀಕ್ಷಿಸಿ




ಅಭಿನಯ: ಹರಿಣಿ - ಇಂದುಶೇಖರ್ - ಸುಮತಿ - ವಾಸುದೇವ್ ಗಿರಿಮಾಜಿ

ಈ ಚಿತ್ರವು ಕನ್ನಡ ಚಿತ್ರಪ್ರಪಂಚದಲ್ಲಿ ನೂತನ ಅಧ್ಯಾಯವನ್ನೇ ಪ್ರಾರಂಭಿಸಲಿದೆ.

a VIJAYA TALKIE Release




# ಪರ್ಟುಸಿನ್

"ಟೆಷ್ನರ್"




60 ವರ್ಷಗಳಿಗಿಂತಲೂ ಹೆಚ್ಚು ಕಾಲದಿಂದ ಪರ್ಟುಸಿನ್ ಎಲ್ಲಾ ತರದ ಕೆಮ್ಮುಗಳಿಂದಲೂ ಮತ್ತು ನಾಯಿಕೆಮ್ಮಿನಿಂದಲೂ ಬಳಲುತ್ತಿದ್ದ ಅಸಂಖ್ಯಾತ ಜನರಿಗೆ, ಅತಿ ಶೀಘ್ರವಾದ ಮತ್ತು ಅತಿ ಸುರಕ್ಷಿತವಾದ ಉಪಶಮನಕಾರಕ ಔಷಧಿಯಾಗಿ ಪರಿಗಣಿಸಲ್ಪಟ್ಟಿರುತ್ತದೆ. ಇಂದೇ ಪರ್ಟುಸಿನ್ ಪಡೆಯಿರಿ.

ಎಲ್ಲಾ ಕೆಮಿಸ್ಟ್ ಅಂಗಡಿಗಳಲ್ಲಿಯೂ ದೊರೆಯುವುದು.

ಇಟೆಫಾ ಲಿಮಿಟೆಡ್, ಷಾನ್, ಲೀಶಿನ್‌ಸ್ಟೀನ್, ಸ್ವಿಸ್ ಕಸ್ಟಮ್ ಮತ್ತು ಎಕನಾಮಿಕ್ ಟೆರಿಟೊರಿ, ಇವರ ಏರ್ಪಾಡಿನಿಂದ **ಇನ್ಫಾ ಲಿಮಿಟೆಡ್**, ಪೋಸ್ಟ್ ಬಾಕ್ಸ್ 1041, ಮುಂಬಯಿ - 1 ಇವರು ಭಾರತದಲ್ಲಿ ತಯಾರಿಸುತ್ತಿರುವರು.

ILY. 7 - KAN

# ಚಂದಮಾಮ

ಸಂಚಾಲಕರು: 'ಚಕ್ರಪಾಣಿ'

---

ಕ್ರಿ. ವ. 1955 ಕಾಲಿಟ್ಟಿತು. ಎಲ್ಲರೂ ಈಗ ತಾನೇ ಹೊಸ ಕ್ಯಾಲೆಂಡರುಗಳನ್ನು ಸಂಗ್ರಹಿಸುತ್ತಾರೆ. ಕ್ಯಾಲೆಂಡರು ವಿವಿಧರೂಪಗಳಲ್ಲಿದ್ದರೂ ಅರ್ಥ ಒಂದೇ. ಆದುದರಿಂದ ಮನೆಯ ಗೋಡೆಗಳಲ್ಲೆಲ್ಲಾ ಮಿತಮೀರಿ ಕ್ಯಾಲೆಂಡರು ನೇತಾಡಿಸುವುದು ಚೆಂದವಲ್ಲ. ಒಂದು ಕೋಣೆಗೆ ಒಂದೆರಡು ಸುಂದರ ಕ್ಯಾಲೆಂಡರುಗಳಿದ್ದರೇ ಭೂಷಣ. ಇನ್ನು ಹೊಸ ವರ್ಷದ ಸಡಗರದಲ್ಲಿ ಹಳೆವರ್ಷವನ್ನು ಮರೆಯಬಾರದು. ಅದೊಂದು ಮೇಲು ಪಙ್ತಿಯಂತೆ ಭಾವಿಸಬೇಕು. ಅಲ್ಲಿಯ ತಪ್ಪು ಒಪ್ಪುಗಳನ್ನು ಮನದಂದು, ಹೊಸ ವರ್ಷದಲ್ಲಿ ಸರಿಯಾಗಿ ನಡೆಯಲು ಮನಃಪೂರ್ವಕವಾಗಿ ದೃಢಮಾಡಿಕೊಳ್ಳಬೇಕು. ಅದುವೇ ಹಳೆವರ್ಷಕ್ಕೆ ನೀವು ಕೊಡುವ ಕೃತಜ್ಞತೆ. ಹೀಗೆ ಕಿರಿಯರಿಗೂ ಹಿರಿಯರಿಗೂ "ಚಂದಮಾಮ"ನ ಪ್ರೀತಿಯ ಶುಭಾಕಾಂಕ್ಷೆಗಳು.

ಜನವರಿ ೧೯೫೫



ಸಂಪುಟ ೧೪
ಸಂಚಿಕೆ ೧

# ಅನ್ಯೋನ್ಯ ಪ್ರೀತಿ?

ನರಿಯೊಂದು ಹಸಿವಿಂದ
ಬೇಟೆಯನು ಅರಸುತ್ತ
ಕಿರಿಯ ಹಳ್ಳಿಗೆ ಬಂತು ಸಂಜೆಯಲ್ಲಿ

ಮರಿಗಳೊಡನಿದ್ದ ಹೇ
ಟೆಯ ಗೂಡಿ ನೊಳಗಟ್ಟಿ
ನರಿಯನೋಡಿತು ಹುಂಜ ಮಾಡಿನಲ್ಲಿ.

ಚಾಲಾಕಿ ನರಿಯಣ್ಣ
ತಲೆಯೆತ್ತಿ ನೋಡುತ್ತ
ಹೇಳಿ 'ತೆಲೆ ಹುಂಜಣ್ಣ ಬಾಬೆದರದೆ,





ಕೇಳಿಲ್ಲವೇ ನೀನು
ಮೃಗಸಭೆಯ ಸಂಗತಿಯ?
ಹೇಳುವೆನು ಕೇಳಿನ್ನು ಬಾ ಅಳುಕದೆ.

ನಿನ್ನೆಯಾ ಸಭೆಯಲ್ಲಿ
ವಿಧಿಯಾಯ್ತು; ನಾವೆಲ್ಲ
ಇನ್ನುಮುಂದಕೆ ಜೀವಹಿಂಸೆಬಿಟ್ಟು,

ಅನ್ಯೋನ್ಯ ಪ್ರೀತಿಯಿಂ
ದಿರಬೇಕು, ಎಂಬುದಿದು
ನಿನ್ನೆಯಿಂದಲೆ ಆದ ಕಟ್ಟುನಿಟ್ಟು.

ಎಲೊ ಅಣ್ಣ, ನಿನಗಿದನು
ತಿಳಿಯದಿದ್ದರೆ ತಿಳಿಸಿ
ಚೆಲು ಹಳ್ಳಿ ಪ್ರಾಣಿಗಳ್ ಎಲ್ಲರೊಡನೆ





" ಮಾರಂಗ "

' ಎಲ್ಲರ್ಗೆ ಳೆಯರೆನುತ
ನಾಯಣ್ಣನಿಗೆ ಹೆದರಿ
ಎಲ್ಲಿಗೋಡುವಿಯೊ ?' ಹುಂಜವು ಕೇಳಿತು.

' ಅರಿಯನೇನೋ ನಾಯಿ
ಸಭೆಯ ವಿಧಿಯನು ' ಎಂದು
ನರಿ ಮಾರುಗೊಟ್ಟೋಡಿ ಮರೆಯಾಯಿತು.

ನರಿಯವಂಚನೆಯ ಮುರಿ
ದಾ ಹುಂಜದಂತೆಯೇ
ದುರುಳರಲಿ ನಡೆಯಿರೆಚ್ಚರವನಾತು.

ನಲುಮೆಯಿಂದಿರ ಬಂದೆ
ಅಪ್ಪೆನ್ನ, ಬಾ ಮುಂದೆ
ನಲಿವನಾವ್, ನೀ ಹೇಟೆ ಮರಿಗಳೊಡನೆ.'

ನರಿಯ ತಂತ್ರವ ಬಲ್ಲ
ಅರಿವುಳ್ಳ ಹುಂಜಣ್ಣ
ನರಿಗೆ ಪ್ರತಿ ತಂತ್ರದಿಂ ಕೊರಳನೆಗವಿ

ತಿರುತಿರುಗಿ ನೋಡುತಿರೆ
ನರಿಬೆದರಿ ಕೇಳಿ ' ತೆಲೊ,
ಕೊರಳೆತ್ತಿ ಹಾಗೆ ಏನಂ ನೋಡುವಿ ?'

' ನಿಲ್ಲು ನಾಯಣ್ಣನೂ
ಬರುವ ನೋಡಲ್ಲೆ ' ನಲು
' ಎಲ್ಲೆಂ ' ದು ನರಿಯಂಜಿ ಓಡಲಾಯ್ತು.



# ಮುಖಚಿತ್ರ

**ಪಾಂ**ಡವರಲ್ಲಿ ನಡುವಿನವನಾದ ಅರ್ಜುನನು ಇನ್ನೂ ಹಿಂದಿರುಗಿರಲಿಲ್ಲ. ಧರ್ಮರಾಯಾದಿಗಳು ಅರ್ಜುನನು ಇಲ್ಲದ ಚಿಂತೆಯನ್ನು ಪುಣ್ಯಕಥಾಶ್ರವಣಗಳಿಂದ ಹೋಗಲಾಡಿಸಿಕೊಳ್ಳುತ್ತ ಕಾಮ್ಯಕವನದಲ್ಲಿ ಬೀಡುಬಿಟ್ಟಿದ್ದರು.

ಒಮ್ಮೆ ಅವರು ದ್ರೌಪದಿಯೊಂದಿಗೆ ತಿರುಗಾಡುತ್ತ ಕಾಮ್ಯಕವನದಿಂದ ಬಹುದೂರ ಹೋದರು. ಅಲ್ಲಿರುವ ಅನೇಕ ಹೊಸ ಮುನಿಜನರ ಪರಿಚಯ ಮಾಡಿಕೊಂಡರು. ಮೈನಾಕ, ಹಿರಣ್ಯಶಿರ ಮೊದಲಾದ ಪುಣ್ಯಪರ್ವತಗಳ ಶಿಖರಗಳನ್ನು ಕಂಡರು. ಬಿಂದುಸರಸ್ತೀರವೆಂಬ ದಿವ್ಯಪ್ರದೇಶದಲ್ಲಿ ಆರುದಿನ ತಂಗಿದ್ದರು.

ಏಳನೇದಿನ ಬೆಳಗ್ಗೆ ಎಲ್ಲಿಂದಲೋ ಹೊರಟುಬಂದ ಒಂದು ಅಪೂರ್ವ ಸೌಗಂಧವು ಎಲ್ಲರ ಮೂಗನ್ನೂ ಮನಸ್ಸನ್ನೂ ಅರಳಿಸಿತು. ದ್ರೌಪದಿಯಂತೂ ಅತಿ ಕುತೂಹಲದಿಂದ ಗಾಳಿಯನ್ನು ಮೂಸಿ ಮೂಸಿ ತಿರುಗಾಡಿದಳು. ಆಗ ಈಶಾನ್ಯದಿಕ್ಕಿನಿಂದ ಒಂದು ಕೆಂಪಾದ ಹೊಳೆಯುವ ಹೂ ಹಾರಿಬರುತ್ತಿತ್ತು. ಅದು ಬ್ರಾಹ್ಮಣರೊಂದಿಗಿದ್ದ ಪಾಂಡವರ ಬಳಿಯಲ್ಲೇ ದ್ರೌಪದಿಯ ಮುಂದೆ ಬಿದ್ದಿತು. ಆತುರದಿಂದ ದ್ರೌಪದಿ ಅದನ್ನು ಎತ್ತಿಕೊಂಡು ಆನಂದಪರವಶಳಾದಳು.

ಅಂತಹ ಪರಿಮಳದ ದಿವ್ಯಸುಂದರವಾದ ಹೂವನ್ನು ಈವರೆಗೂ ದ್ರೌಪದಿ ಕಂಡಿಲ್ಲ, ಕೇಳಿಲ್ಲ. ಅದು ಸೌಗಂಧಿಕಾಪುಷ್ಪವೆಂದೂ, ಎಲ್ಲಿರುವುದೋ ತಿಳಿಯದೆಂದೂ ಋಷಿಗಳು ಹೇಳಿದರು. ದ್ರೌಪದಿಯ ಮನಸ್ಸು ಆ ಹೂವಿನಲ್ಲೇ ಮಗ್ನವಾಯಿತು.

ಇಂತಹ ದಿವ್ಯಪುಷ್ಪ ಇನ್ನೂ ತನಗೆ ಬೇಕೆಂದು ದ್ರೌಪದಿಗೆ ಆಸೆಯಾಯಿತು. ತನ್ನ ಆಸೆಯನ್ನು ಈಡೇರಿಸಲು ಭೀಮಸೇನನೇ ಸಮರ್ಥನೆಂದುಕೊಂಡು ಭೀಮನನ್ನು ಕುರಿತು—"ಸ್ವಾಮಿ, ಈ ಅಪೂರ್ವ ಕುಸುಮ ಎಲ್ಲಿರುವುದೋ, ಯಾವ ತೋಟದಲ್ಲಿರುವುದೋ ನೋಡಿ ಇನ್ನಿಷ್ಟು ತಂದು ಕೊಡಿ. ಇದು ಈಗತಾನೇ ತೊಟ್ಟಿನಿಂದ ಕಳಚಿ ಹಾರಿಬಂದಹಾಗಿದೆ. ಆದುದರಿಂದ ಸಮೀಪವೇ ಇದ್ದೀತು ಇದರ ತೋಟ" ಎಂದು ಕೇಳಿಕೊಂಡಳು.

ಭೀಮಸೇನನಿಗೆ ದ್ರೌಪದಿಯ ಮೇಲೆ ಅಪಾರವಾದ ಪ್ರೀತಿ. ಕೂಡಲೇ ಅವನು ಉತ್ಸಾಹದಿಂದ—"ಅದಕ್ಕೇನು ಮಹಾ? ಈಶಾನ್ಯದಿಕ್ಕಿನಿಂದಲ್ಲವೇ ಇದು ಹಾರಿಕೊಂಡು ಬಂತು? ಇದರ ಪರಿಮಳವೂ ಅಮೋಘವಾದುದೇ. ಈಗಲೇ ಹೋಗಿ ನಿನಗೆ ತಂದುಕೊಡುವೆನು" ಎಂದು ಹೇಳಿ, ಭೀಮಸೇನನು ತೋಳು ತಟ್ಟಿಕೊಂಡು ಈಶಾನ್ಯದಿಕ್ಕಿಗೆ ಅಭಿಮುಖವಾಗಿ ಸಾಗಿದನು.




ಒಂದು ರಾಜ್ಯದಲ್ಲಿ ಕಳ್ಳತನಗಳು ದಿನೇ ದಿನೇ ಹೆಚ್ಚಾಗುತಲಿದ್ದುವು. ರಾಜನು ಇದನ್ನು ಕಂಡು ಕೈಗೆ ಸಿಕ್ಕಿದ ಕಳ್ಳರನ್ನು ಬಹಿರಂಗವಾಗಿ ಗಲ್ಲಿಗೇರಿಸಬೇಕೆಂದು ಹುಕುಂ ಹೊರಡಿಸಿದನು. ಆ ರಾಜ್ಯದಲ್ಲೇ ಕನ್ನಪ್ಪ ಮತ್ತು ಚಿನ್ನಪ್ಪರೆಂಬ ಇಬ್ಬರು ಕಳ್ಳರಿದ್ದರು. ಸಂಗಡಿಗರಲ್ಲಿ ಹಲವರನ್ನು ಗಲ್ಲಿಗೇರಿಸಿದುದರಿಂದ ಅವರು ಹೆದರಿ, ಕಳ್ಳತನವನ್ನು ಬಿಟ್ಟುಬಿಡಬೇಕೆಂದು ನಿಶ್ಚಯಿಸಿದರು. "ನಾವು ಇನ್ನುಮೇಲಾದರೂ ಯೋಗ್ಯ ಕಸಬಿನಿಂದ ಜೀವಿಸುವ" ಎಂದ ಕನ್ನಪ್ಪ. "ಮಾಡಬೇಕೆಂದರೆ ಬೇಕಷ್ಟು ಕೆಲಸಗಳಿವೆ." ಎಂದು ಧ್ವನಿಗೂಡಿಸಿದ ಚಿನ್ನಪ್ಪ.

ಅವರಿಬ್ಬರೂ ಪಕ್ಕದ ಗ್ರಾಮಕ್ಕೆ ಹೋಗಿ ಪಟೇಲನ ಹತ್ತಿರ ಕೆಲಸ ಗಿಟ್ಟಿಸಿಕೊಂಡರು. ಪ್ರತಿದಿನ ದನಕರುಗಳನ್ನು ಮೇಯಿಸಿಕೊಂಡು ಬರುವುದು ಕನ್ನಪ್ಪನ ಕೆಲಸ. ದಿನಾ ತೋಟಕ್ಕೆ ನೀರು ಹಾಕುವುದು ಚಿನ್ನಪ್ಪನ ಕಾರ್ಯ.

ಮೊದಲನೆಯದಿನ ಕನ್ನಪ್ಪ ಬೆಳಗಾದ ಕೂಡಲೇ ಎದ್ದು ದನಗಳನ್ನು ಮೇಯಿಸಿಕೊಂಡು ಮೈದಾನಕ್ಕೆ ಹೊರಟ. ದನಗಳು ಅವನಿಗೆ ನಾನಾ ಹಿಂಸೆ ಕೊಟ್ಟವು. ಅವುಗಳಲ್ಲಿ ಒಂದಕ್ಕೊಂದು ಹೊಡೆದಾಡಿಕೊಂಡವು, ಕೆಲವು ಸಿಕ್ಕಸಿಕ್ಕಕಡೆ ಓಡಾಡಿದವು, ಮತ್ತೆ ಕೆಲವು ಅಕ್ಕಪಕ್ಕದಲ್ಲಿದ್ದ ಹೊಲಗದ್ದೆಗಳಿಗೆ ನುಗ್ಗಿದವು. ಅವುಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಳ್ಳಲು ಕನ್ನಪ್ಪನಿಗೆ ತುಂಬಾ ಪ್ರಯಾಸವಾಯಿತು.

ಇತ್ತ ಚಿನ್ನಪ್ಪ ತೋಟದಲ್ಲಿದ್ದ ಮರಗಿಡಗಳಿಗೆ ಎಷ್ಟು ಬಿಂದಿಗೆ ನೀರು ಸೇದಿಹಾಕಿದರೂ ಸಾಲಲಿಲ್ಲ. ಅರ್ಧಭಾಗದಷ್ಟು ತೋಟಕ್ಕೆ ನೀರು ಸುರಿಯುವ ಮೊದಲೇ ಆತನ ಕೈಗಳು ಸೋತು, ಬೆನ್ನುಮುರಿದಂತಾಯಿತು. ಆದರೂ ಅವನು ಸಾಯಂಕಾಲದ ವರೆವಿಗೂ ನೀರು ಹಾಕುತ್ತಲೇ ಇದ್ದ.

ಅಂದು ರಾತ್ರಿ ಕನ್ನಪ್ಪ ಚಿನ್ನಪ್ಪರು ತಮ್ಮ ತಮ್ಮ ಕೆಲಸಗಳನ್ನು ಕುರಿತು ಮಾತನಾಡಿಕೊಂಡರು. "ನನಗೆ ಕೆಲಸ ಮಾಡಿದಂತೆಯೇ ತೋರಲಿಲ್ಲ. ದನಗಳನ್ನು ಮೇವಿಗೆ ಬಿಟ್ಟು ಮರದ ಕೆಳಗೆ ಮಲಗಿ ಹಾಯಾಗಿ ನಿದ್ದೆಹೋದೆ.

ಮಾಲಿನೀ ಮಾಧವಯ್ಯ



ಸಂಜೆಯಾಗುವ ವೇಳೆಗೆ ದನಗಳು ತಮ್ಮಷ್ಟಕ್ಕೆ ತಾವೇ ನನ್ನ ಬಳಿಗೆ ಬಂದವು. ಅವುಗಳ ಗಂಟೆಯ ನಿನಾದದಿಂದ ಎಚ್ಚರಗೊಂಡು ಅವುಗಳನ್ನು ಮನೆಗೆ ಅಟ್ಟಿಕೊಂಡು ಬಂದೆ" ಎಂದುಹೇಳಿದ ಕನ್ನಪ್ಪ.

"ನಾನೂ ಅಷ್ಟೇಯೇ. ನಾಲ್ಕು ಬಿಂದಿಗೆ ನೀರು ಹಾಕಿದ ಕೂಡಲೇ ತೋಟವೆಲ್ಲಾ ತುಂಬಿತು. ಹಗಲೆಲ್ಲಾ ಮಂಚದ ಮೇಲೆ ಮಲಗಿ ನಿದ್ದೆಹೋದೆ" ಎಂದ ಚಿನ್ನಪ್ಪ.

"ಭೇಷ್, ನಾಳೆ ನೀನು ದನಗಳನ್ನು ಮೇಯಿಸಿಕೊಂಡು ಬಾ, ನಾನು ನೀರು ಹಾಕುತ್ತೇನೆ. ತಮಾಷೆಯಾಗಿರುತ್ತದೆ" ಎಂದ ಕನ್ನಪ್ಪ. ಚಿನ್ನಪ್ಪನಿಗೆ ಬಹಳ ಸಂತೋಷವಾಯಿತು. "ನಾನೂ ಅದೇ ಸಲಹೆ ಸೂಚಿಸಲಿದ್ದೆ" ಎಂದ ಕನ್ನಪ್ಪನೊಂದಿಗೆ ಚಿನ್ನಪ್ಪ. "ಬಯಲಲ್ಲಿ ಮಲಗಿಕೊಳ್ಳಲು ಮಂಚವನ್ನೂ ಸಹ ತೆಗೆದುಕೊಂಡು ಹೋಗು" ಎಂದು ಸಲಹೆ ಮಾಡಿದ ಕನ್ನಪ್ಪ.

ಮಾರನೇಯ ದಿನ ಇಬ್ಬರೂ ತಮ್ಮ ಕೆಲಸಗಳನ್ನು ಅದಲುಬದಲು ಮಾಡಿಕೊಂಡರು. ಒಬ್ಬನ ಮೋಸ ಮತ್ತೊಬ್ಬನಿಗೆ ತಿಳಿಯಿತು.

ಆದರೆ ಕನ್ನಪ್ಪ ಒಂದು ವಿಚಿತ್ರವನ್ನು ಗಮನಿಸಿದ. ತೋಟದಲ್ಲಿದ್ದ ಒಂದು ಮಾವಿನ ಮರದ ಬುಡದಲ್ಲಿ ಎಷ್ಟೇ ಬಿಂದಿಗೆ ನೀರೆರೆದರೂ ಅಂದು ಇಂಗಿಹೋಗುತಿತ್ತು. ಅದರ ರಹಸ್ಯವನ್ನು ಆ ರಾತ್ರಿ ಬೇಧಿಸಲೇಬೇಕೆಂದು ಅವನು ನಿರ್ಧರಿಸಿದ.

ಅಂದು ರಾತ್ರಿ ಕನ್ನಪ್ಪನಾಗಲೀ, ಚಿನ್ನಪ್ಪನಾಗಲೀ ತಮ್ಮ ಕೆಲಸಗಳನ್ನು ಕುರಿತು ಮಾತನಾಡಲಿಲ್ಲ. ಇಬ್ಬರೂ ನಿದ್ದೆಹೋಗುತ್ತಿದ್ದಂತೆ ನಟಿಸಿದರು. ಅರ್ಧರಾತ್ರಿ ವೇಳೆಯಲ್ಲಿ ಕನ್ನಪ್ಪನೆದ್ದು ಪಕ್ಕದಲ್ಲೇ ಇದ್ದ ಗುದ್ದಲಿಯನ್ನು ತೆಗೆದುಕೊಂಡು ಮಾವಿನಮರದ ಹತ್ತಿರ ಹೋಗಿ ಅದರ ಪಾತಿಯನ್ನು ಅಗೆಯಲಾರಂಭಿಸಿದ. ಹಾಗೆ ಸ್ವಲ್ಪ ಹೊತ್ತು ಅಗೆದ ನಂತರ ಗುದ್ದಲಿಗೆ ಏನೋ ತುಗುಲಿ, ಖಣ್ ಎಂಬ ಶಬ್ದ ಬಂತು. ಕೂಡಲೇ ಕನ್ನಪ್ಪ ಸುತ್ತಲೂ ನೋಡಿದ. ಚಿನ್ನಪ್ಪ ಕತ್ತಲೆಯಲ್ಲಿ ತನ್ನ ಪಕ್ಕದಲ್ಲೇ ನಿಂತಿರುವುದು ಕಾಣಿಸಿತು.

"ಈವೇಳೆಯಲ್ಲಿ ಏನು ಅಗೆಯುತ್ತಿರುವೆ?" ಎಂದ ಚಿನ್ನಪ್ಪ. "ಏನಿಲ್ಲ, ಈ ಮರದ ಪಾತಿ

ಸರಿಯಿಲ್ಲ. ನಿದ್ದೆ ಹತ್ತದಿರಲು ಪಾತಿಯನ್ನು ಸರಿಪಡಿಸುತ್ತಿದ್ದೇನೆ'' ಎಂದ ಕನ್ನಪ್ಪ.

"ಖಣ್ ಅಂತ ಶಬ್ದಬಂತಲ್ಲಾ ಅದೇನದು?" ಚಿನ್ನಪ್ಪ ಕೇಳಿದ. "ಯಾವುದೋ ಕಲ್ಲಿರಬೇಕು. ನಡಿ, ಹೋಗಿ ಮಲಗಿಕೊಳ್ಳೋಣ" ಎಂದು ಕನ್ನಪ್ಪ ಸೂಚಿಸಿದ.

ಇಬ್ಬರೂ ಹೋಗಿ ಮಲಗಿಕೊಂಡರು. ಚಿನ್ನಪ್ಪ ನಿದ್ದೆಮಾಡಿದನಂತರ ಮತ್ತೆ ಬಂದು ಗುದ್ದಲಿಗೆ ತಗುಲಿದ ವಸ್ತುವನ್ನು ನೋಡೋಣವೆಂದು ಯೋಚಿಸಿದ್ದ ಕನ್ನಪ್ಪ. ಆದರೆ ಚಿನ್ನಪ್ಪನಿಗಿಂತಲೂ ಅವನಿಗೇ ಬೇಗ ನಿದ್ದೆ ಬಂದುಬಿಟ್ಟಿತು.

ಕನ್ನಪ್ಪ ಗೊರಕೆ ಹೊಡೆಯುವುದನ್ನು ಪ್ರಾರಂಭಮಾಡುತ್ತಲೇ ಚಿನ್ನಪ್ಪನೆದ್ದ. ಗುದ್ದಲಿ ತೆಗೆದುಕೊಂಡು ಮಾವಿನಮರದ ಹತ್ತಿರಕ್ಕೆ ಬಂದ. ಪಾತಿ ಅಗೆದು ಎರಡು ಕೊಡಗಳನ್ನು ಹೊರಕ್ಕೆ ತೆಗೆದ. ಅವುಗಳನ್ನು ಎಲ್ಲಿಯಾದರೂ ಬಚ್ಚಿಡಬೇಕು. ಸಮೀಪದಲ್ಲೇ ಕೆರೆಯೊಂದಿತ್ತು. ಆಳವಿಲ್ಲದ ಸ್ಥಳದಲ್ಲಿ ಆ ಕೊಡಗಳನ್ನು ಹೂತಿಟ್ಟು, ಚಿನ್ನಪ್ಪ ಏನೂ ಅರಿಯದವನಂತೆ ಬಂದು ಮಲಗಿಕೊಂಡು ನಿದ್ದೆಹೋದ.

ಕನ್ನಪ್ಪ ಬೆಳಗಿನಜಾವವೇ ಎದ್ದ. ಗುದ್ದಲಿ ತೆಗೆದುಕೊಂಡು ಮರದ ಹತ್ತಿರ ಹೋದ. ಧನದ ಕೊಡಗಳ ಪತ್ತೆಯೇ ಇಲ್ಲ. ನಿದ್ದೆ ಮಾಡುತ್ತಿದ್ದ ಚಿನ್ನಪ್ಪನ ಹಾಸಿಗೆಯ ಬಳಿ ಬಂದು, ಅವನ ಕಾಲುಗಳನ್ನು ಸೂಕ್ಷ್ಮವಾಗಿ ಪರೀಕ್ಷೆಮಾಡಿದ. ಚಿನ್ನಪ್ಪನ ಕಾಲುಗಳಿಗೆ ಕೆಸರು ಮತ್ತು ಸ್ವಲ್ಪ ಪಾಚಿ ಮೆತ್ತಿ






ಕೊಂಡಿತ್ತು ಪಾತಿಯಲ್ಲಿ ಸಿಕ್ಕಿದ ವಸ್ತುಗಳನ್ನು ಚಿನ್ನಪ್ಪ ಕೆರೆಯಲ್ಲಿ ಬಚ್ಚಿಟ್ಟಿರಬೇಕೆಂದು ಗ್ರಹಿಸಿ, ಸೀದಾಕೆರೆಗೆ ಹೋದ. ಕೆರೆಯಲ್ಲಿ ಒಂದುಕಡೆ ಕಪ್ಪೆಗಳ ವಟಗುಟ್ಟುವ ಶಬ್ದ ವಿರಲಿಲ್ಲ. ಅಲ್ಲಿ ಆತನು ಹುಡುಕಲು ಕೊಡಗಳೆರಡು ಸಿಕ್ಕಿದವು. ಅವುಗಳನ್ನು ಭುಜದಮೇಲಿಟ್ಟುಕೊಂಡು, ಸ್ವಗ್ರಾಮಾಭಿಮುಖವಾಗಿ ನಡೆದ.

ಚಿನ್ನಪ್ಪ ಸ್ವಲ್ಪ ಹೊತ್ತಿಗೆಲ್ಲಾ ನಿದ್ರೆಯಿಂದ ಎಚ್ಚೆತ್ತ. ಪಕ್ಕದಲ್ಲಿ ಕನ್ನಪ್ಪ ಕಾಣಬರಲಿಲ್ಲ. ದುಗುಡದಿಂದ ಕೆರೆಗೆ ಹೋಗಿ ತಾನು ಅಡಗಿಸಿಟ್ಟದ್ದ ಕೊಡಗಳಿಗಾಗಿ ಹುಡುಕಾಡಿದ. ಅವು ಅಲ್ಲಿರಲಿಲ್ಲ. ಕನ್ನಪ್ಪನೇ ಅವುಗಳನ್ನು ತೆಗೆದುಕೊಂಡು ಸ್ವಗ್ರಾಮಕ್ಕೆ ಹೋಗಿರಬಹುದೆಂದು ಗ್ರಹಿಸಿ, ತಾನೂ ಬೇಗಬೇಗನೆ ಅತ್ತಕಡೆಗೇ ಓಡಿದ. ಚಿನ್ನಪ್ಪ ಸ್ವಲ್ಪಹೊತ್ತು ಓಡಲು, ಅವನಿಗೆ ಅಷ್ಟು ದೂರದಲ್ಲಿ ಕೊಡಗಳನ್ನು ಹೊತ್ತುಕೊಂಡು ಹೋಗುತ್ತಿದ್ದ ಕನ್ನಪ್ಪ ಕಾಣಿಸಿದ. ಚಿನ್ನಪ್ಪ ಆ ಮಾರ್ಗವನ್ನು ಬಿಟ್ಟು ಕಾಲುದಾರಿಯಲ್ಲಿ ಓಡಿ, ಕನ್ನಪ್ಪನಿಗಿಂತಲೂ ಮುಂಚೆ ಹೋಗಿ ಕನ್ನಪ್ಪನು ಹಿಡಿದಿದ್ದ ಮಾರ್ಗಕ್ಕೆ ಮತ್ತೆ ಬಂದು, ತನ್ನ ಎಕ್ಕಡಗಳಲ್ಲಿ ಒಂದನ್ನು ಒಂದೆಡೆ ಬಿಟ್ಟು, ಮತ್ತೊಂದನ್ನು ನೂರುಗಜಗಳ ಅಂತರದಲ್ಲಿ ಬಿಟ್ಟು, ಒಂದು ಮರದಮೇಲೆ ಹತ್ತಿ ಕುಳಿತುಕೊಂಡ.

ಕೊಂಚ ಹೊತ್ತಿಗೆಲ್ಲಾ ಕನ್ನಪ್ಪ ಪ್ರಯಾಸದಿಂದ ಕೊಡಗಳನ್ನು ಹೊತ್ತುಕೊಂಡು ಆ ದಾರಿಯಲ್ಲಿ ಬಂದ. ಹೊಸ ಎಕ್ಕಡವೊಂದು ಅವನಿಗೆ ಕಾಣಿಸಿತು. ಆದರೆ ಒಂದೇ ಒಂದು ಎಕ್ಕಡವಿರುವುದನ್ನು ಕಂಡು ನಿರಾಶೆಗೊಂಡು ಮುಂದಕ್ಕೆ ನಡೆದ. ನೂರುಗಜ ಹಾಗೆ ನಡೆಯಲು ಅವನಿಗೆ ಅದರ ಜೊತೆ ಎಕ್ಕಡ ಕಾಣಿಸಿತು. ಅವನಿಗೆ ಆಶೆಯುಂಟಾಯಿತು. ಸುತ್ತಮುತ್ತ ಯಾರೂ ಇಲ್ಲದಿರುವುದನ್ನು ಕಂಡು, ಕನ್ನಪ್ಪ ಕೊಡಗಳನ್ನು ಕೆಳಗಿಳಿಸಿ, ಅಲ್ಲಿದ್ದ ಎಕ್ಕಡವನ್ನು ತೆಗೆದುಕೊಂಡು, ಹಿಂದೆ ತಾನು ಕಂಡಿದ್ದ ಎಕ್ಕಡವನ್ನು ತರಲು ಹಿಂತಿರುಗಿದ.

ಇದೇ ಸಮಯವೆಂದು ಚಿನ್ನಪ್ಪ ಮೆಲ್ಲನೆ ಮರದಿಂದ ಇಳಿದು ಬಂದು ಆ ಕೊಡಗಳನ್ನು ತೆಗೆದುಕೊಂಡು ವೇಗವಾಗಿ ನಡೆದು ತನ್ನ ಮನೆ ಸೇರಿಕೊಂಡ.



ಎರಡು ಹೊಸ ಎಕ್ಕಡಗಳೊಂದಿಗೆ ಕನ್ನಪ್ಪ ತಾನು ಕೊಡಗಳಿಟ್ಟಿದ್ದ ಸ್ಥಳಕ್ಕೆ ಬಂದು ನೋಡಲು ಅವು ಮಾಯವಾಗಿದ್ದುವು. ಇದು ಚಿನ್ನಪ್ಪನ ಕಾರ್ಯವಿರಬೇಕೆಂದು ನೆನೆಸಿ, ಕನ್ನಪ್ಪ ಬೇಗಬೇಗನೆ ಹೆಜ್ಜೆಹಾಕಿ ಚಿನ್ನಪ್ಪನ ಮನೆಗೆ ಬಂದು ಮುಟ್ಟಿದ.

ಚಿನ್ನಪ್ಪನ ಮನೆಯಲ್ಲಿ ಕಾಲಿಟ್ಟಕೂಡಲೇ ಗೊಳೋ ಎಂದು ಅಳುವಿನ ಧ್ವನಿ ಕೇಳಿಸಿತು. ವಿಷಯವೇನೆಂದು ಕೇಳಲಾಗಿ, ಚಿನ್ನಪ್ಪನ ಹೆಂಡತಿ ಮತ್ತು ಮಗನು ಶೋಕಿಸುತ್ತಾ, ಚಿನ್ನಪ್ಪನು ಸತ್ತುಹೋದನೆಂದು ಹೇಳಿದರು. ಮುಸುಕು ಹಾಕಿ ನಡುಮನೆಯಲ್ಲಿ ಮಲಗಿಸಿದ್ದ ಚಿನ್ನಪ್ಪನನ್ನು ತೋರಿಸಿದರು.

ಸ್ವಲ್ಪಹೊತ್ತು ಕನ್ನಪ್ಪನೂ ಅವರೊಂದಿಗೆ ಕಣ್ಣೀರು ಸುರಿಸಿ, ಈರೀತಿ ಹೇಳಿದ:

"ನಾವಿಬ್ಬರೂ ತುಂಬಾ ಅನ್ಯೋನ್ಯವಾಗಿದ್ದೆವು. ಇನ್ನು ಚಿನ್ನಪ್ಪನ ಕೊನೆಯ ಕೋರಿಕೆಯನ್ನು ತೀರಿಸುವುದರ ಹೊರತಾಗಿ ನಾನು ಮಾಡುವುದಾದರೂ ಏನಿದೆ? ತಾನು ನನಗಿಂತಲೂ ಮೊದಲೇ ತೀರಿಕೊಂಡರೆ, ಕಟಾವು ಮಾಡಿದ ತೊಗರಿ ಹೊಲದಲ್ಲಿ ತೊಗರಿ ಕೂಳೆಗಳಮೇಲಿಂದ ತನ್ನ ಶವವನ್ನು ಎಳೆಯಬೇಕೆಂದು ಹೇಳಿದ್ದ. ಅವನ ಕೋರಿಕೆಯನ್ನು ನೆರವೇರಿಸುವುದು ನನ್ನ ಕರ್ತವ್ಯ."

ಹೀಗೆಂದು ಕನ್ನಪ್ಪ. ಚಿನ್ನಪ್ಪನ ಶರೀರವನ್ನು ತನ್ನ ಭುಜದಮೇಲೆ ಹಾಕಿಕೊಂಡು, ಯಾರ ಮಾತನ್ನೂ ಕಿವಿಯಮೇಲೆ ಹಾಕಿಕೊಳ್ಳದೆ, ಕಟಾವುಮಾಡಿದ ತೊಗರಿ ಹೊಲಕ್ಕೆ ಹೋದ. ನೆಲದಮೇಲಿರುವ ಕತ್ತಿಗಳಂತಿರುವ ಕೂಳೆಗಳನ್ನು ಕಂಡು ಚಿನ್ನಪ್ಪ ಬೆದರಿದ.

ಅವನು ಚಟಕ್ಕನೆದ್ದು ಕನ್ನಪ್ಪನ ಕಾಲು ಹಿಡಿದುಕೊಂಡು "ಅಣ್ಣಾ, ನನ್ನನ್ನು ಮನ್ನಿಸು. ನಾವು ಕಳ್ಳತನವನ್ನು ಬಿಟ್ಟು ನೀತಿವಂತರಾಗಿ ಬಾಳೋಣವೆಂದುಕೊಂಡಿರುವಾಗ ಈ ಕಳ್ಳಬುದ್ಧಿಗಳುಮಾತ್ರವೇಕೆ? ಈಗ ನಮ್ಮಹತ್ತಿರ ಎರಡು ಕೊಡಗಳಿವೆ. ತಲಾ ಒಂದೊಂದು ತೆಗೆದುಕೊಂಡು ಆ ಧನದಿಂದ ಸುಖವಾಗಿ ಬಾಳೋಣ" ಎಂದ.

ಬಳಿಕ ಅವರಿಬ್ಬರೂ ಹಾಗೆಯೇ ಹಂಚಿಕೊಂಡು, ಹಾಯಾಗಿ ಕಾಲಕಳೆಯುತ್ತಿದ್ದರು.





# ಚಿನ್ನದ ಇಲಿ

ಒಂದಾನೊಂದು ದೇಶದಲ್ಲಿ ಕುಮುದಗಿರಿ ಎಂಬ ಪಟ್ಟಣವಿದ್ದಿತು. ಆ ನಗರದಲ್ಲಿ ವೈಶ್ಯ ಸ್ತ್ರೀ ಯೋರ್ವಳು ಇದ್ದಳು. ಆಕೆಯ ಪತಿ ಸತ್ತುಹೋದಕೂಡಲೇ, ದಾಯಾದಿಗಳು ಆತನ ಆಸ್ತಿಯನ್ನೆಲ್ಲಾ ಅಪಹರಿಸಿದರು. ಗಂಡಸಾಯುವಾಗ ಆಕೆ ತುಂಬು ಗರ್ಭಿಣಿ. ಕೆಲ ದಿವಸಗಳ ನಂತರ ಆಕೆಗೊಬ್ಬ ಪುತ್ರನು ಜನಿಸಿದನು. ಆಕೆ ನಾನಾ ಕಷ್ಟಗಳನ್ನು ಅನುಭವಿಸಿ ಹೇಗೋ ಆ ಮಗುವನ್ನು ಸಾಕಿಸಲಹಿ ದೊಡ್ಡವನನ್ನಾಗಿ ಮಾಡಿದಳು. ದೊಡ್ಡವನಾದ ಮೇಲೆ "ಅಪ್ಪಾ, ಮಗೂ, ವ್ಯಾಪಾರ ನಮ್ಮ ಕುಲವೃತ್ತಿ. ವ್ಯಾಪಾರ ಮಾಡಲು ಅಗತ್ಯವಾಗಿ ಬೇಕಾಗಿರುವ ಬಂಡವಾಳವಿಲ್ಲ. ಆದರೆ ಈ ಪಟ್ಟಣದಲ್ಲಿ ಧನಗುಪ್ತರೆಂಬ ಕೋಟೀಶ್ವರರಿರುವರು. ನಮ್ಮ ಯುವಕರಿಗೆ ಅನೇಕರೀತಿ ಸಹಾಯ ಮಾಡುತ್ತಾರೆ. ಅವರಲ್ಲಿಗೆ ಹೋಗಿ ಸ್ವಲ್ಪ ಹಣ ಬೇಡಿತಂದುಕೋ" ಎಂದು ಹೇಳಿದಳು. ಕೂಡಲೇ ಆ ಹುಡುಗನು ಧನಗುಪ್ತನನ್ನು ಸಂಧಿಸಲುಹೋದ. ಆ ಸಮಯದಲ್ಲಿ ಆ ಕೋಟೀಶ್ವರನು ಒಬ್ಬ ಯುವಕನ ಮೇಲೆ ಈರೀತಿಯಾಗಿ ರೇಗಿಬೀಳುತ್ತಿದ್ದ:

"ನಿನಗೆ ಸ್ವಲ್ಪವಾದರೂ ವ್ಯಾಪಾರದಕ್ಷತೆಯಿಲ್ಲ. ಅನೇಕಸಾರಿ ಧನಸಹಾಯ ಮಾಡಿದೆ. ನಾನು ಕೊಟ್ಟ ಹಣವನ್ನು ನೀರುಪಾಲುಮಾಡಿದೆ. ಬುದ್ಧಿವಂತನಾಗಿದ್ದರೆ ಅದೋಅಲ್ಲಿ ಬಿದ್ದಿರುವ ಆ ಸತ್ತ ಇಲಿಯನ್ನೇ ಮೂಲಧನ ಮಾಡಿಕೊಂಡು ಲಕ್ಷಾಂತರ ಸಂಪಾದಿಸುತ್ತಿದ್ದ" ಎಂದು ಬೈಯುತ್ತಿದ್ದ.

ಇದನ್ನು ಕೇಳಿದ ನಮ್ಮಹುಡುಗ ಧನಗುಪ್ತನ ಹತ್ತಿರಹೋಗಿ ಹಣಕೇಳಲಿಲ್ಲ. ದೂರದಲ್ಲಿ ಸತ್ತುಬಿದ್ದಿದ್ದ ಇಲಿಯನ್ನು ತೆಗೆದುಕೊಂಡ. ಅದನ್ನು ವರ್ತಕನೊಬ್ಬನ ಬೆಕ್ಕಿಗೆ ಆಹಾರವಾಗಿ ಕೊಡಲು, ಆ ವರ್ತಕನು ಎರಡು ಬೊಗಸೆಹುರಿಕಡಲೆ ಕೊಟ್ಟ. ಅದರೊಂದಿಗೆ ಒಂದು ಮಡಿಕೆ ತುಂಬಾ ನೀರನ್ನೂ ತೆಗೆದುಕೊಂಡು ಊರಾಚೆಯಿದ್ದ ಅರಳಿಮರದನೆರಳಲ್ಲಿ ಕುಳಿತುಕೊಂಡ. ಬಿಸಿಲು ಏರುತ್ತಾ ಬಂತು. ಮಟಮಟ ಮಧ್ಯಾಹ್ನದವೇಳೆಗೆ ಅಡವಿ

ಬಿ. ಬಾಬುರಾವ್

ಯಿಂದ ಸೌದೆಕಡಿದುಕೊಂಡು ನಗರದಕಡೆ ಹೋಗುತ್ತಿದ್ದವರು ಆ ಮರದ ನೆರಳಲ್ಲಿ ವಿಶ್ರಾಂತಿಗೆ ಕುಳಿತರು. ವೈಶ್ಯಯುವಕನು ಅವರ ಯೋಗಕ್ಷೇಮ ವಿಚಾರಿಸಿ, ತಿನ್ನಲು ಒಂದಿಷ್ಟು ಹುರಿಗಡಲೆ ಕೊಟ್ಟು, ನೀರನ್ನೂ ಕೊಟ್ಟ.

ಅದಕ್ಕೆ ಅವರೆಲ್ಲರೂ ಸಂಪ್ರೀತವಾಗಿ ತಲಾ ಎರಡೆರಡು ಕಟ್ಟಿಗೆಗಳನ್ನು ಕೊಟ್ಟು ಹೋದರು. ಆ ಕಟ್ಟಿಗೆ ಒಂದು ಸಣ್ಣ ಹೊರೆಯಷ್ಟಾಯಿತು. ಅದನ್ನು ಆ ಹುಡುಗ ನಗರಕ್ಕೆ ತೆಗೆದುಕೊಂಡು ಹೋಗಿ ಮಾರಿ, ಆ ಹಣದಿಂದ ಹುರಿಗಡಲೆ ಕೊಂಡುಕೊಂಡ.

ಹೀಗೇ ಕೆಲವು ದಿನಗಳು ಕಳೆದವು. ಆತನು ಸೌದೆಯಹೊರೆಗಳನ್ನೇ ಕೊಂಡುಕೊಳ್ಳುವಷ್ಟು ಹಣ ಶೇಖರಿಸಿದ. ತರುವಾಯ ಹುರಿಗಡಲೆ ವ್ಯಾಪಾರ ನಿಲ್ಲಿಸಿ, ಸೌದೆಹೊರೆಗಳನ್ನು ಕೊಂಡು ಭದ್ರಪಡಿಸಿದ. ಇಷ್ಟರಲ್ಲಿ ಮಳೆಗಾಳಿ ಬಂದಿತು. ಸೌದೆಗೆ ಗಿರಾಕಿ ಹೆಚ್ಚಾಯಿತು. ತಾನು ಕೊಂಡಿದ್ದ ಸೌದೆಯನ್ನೆಲ್ಲಾ ಮಾರಿ, ಒಂದು ಸಣ್ಣ ಚಿಲ್ಲರೆ ಅಂಗಡಿಯಿಟ್ಟ. ಚಿಲ್ಲರೆ ವ್ಯಾಪಾರ ದಿನೇದಿನೇ ವೃದ್ಧಿಯಾಗಿ ಕ್ರಮೇಣ ಭಾರಿ ವ್ಯಾಪಾರವಾಗಿ ಪರಿಣಮಿಸಿತು. ಅದರಿಂದ ಬರುತ್ತಿದ್ದ ಲಾಭದಿಂದ, ಮನೆಮಠ, ಹೊಲಗದ್ದೆಗಳನ್ನು ಕೊಂಡುಕೊಂಡು, ಕಾಲಕ್ರಮೇಣ ಲಕ್ಷಾಧಿಕಾರಿಯಾದ. ಆತನ ಇಷ್ಟೊಂದು ಸಂಪತ್ತಿಗೆ ಮೂಲಧನ ಒಂದು ಇಲಿಯಾದುದರಿಂದ ಆತನನ್ನು 'ಇಲಿಶೆಟ್ಟಿ' ಎಂದು ಕರೆಯುತ್ತಿದ್ದರು ಜನ.

ಇಲಿಶೆಟ್ಟಿ ಒಂದು ದಿನ ಬಂಗಾರದ ಇಲಿಯನ್ನೊಂದು ಮಾಡಿಸಿ, ಅದನ್ನು ತೆಗೆದುಕೊಂಡು ಹೋಗಿ ಧನಗುಪ್ತನಿಗೆ ಸಮರ್ಪಿಸಿ, "ಅಯ್ಯಾ, ಇದು ನನಗೆ ನೀವು ತೋರಿಸಿದ ಮೂಲಧನ. ಇದರಿಂದ ನಾನು ಬಹಳ ಹಣವನ್ನು ಸಂಪಾದಿಸಿದೆ. ಬಡ್ಡಿಯೊಂದಿಗೆ ನಿಮಗೆ ಒಪ್ಪಿಸುತ್ತಿರುವೆನು, ಸ್ವೀಕರಿಸಬೇಕು" ಎಂದ.

ಧನಗುಪ್ತನು ವಿಸ್ಮಯಗೊಂಡ. ಆದರೆ ಇಲಿಶೆಟ್ಟಿ ವಿಷಯವನ್ನೆಲ್ಲಾ ವಿವರಿಸಿ ಹೇಳಿದ ನಂತರ ಧನಗುಪ್ತನು ಆತನ ತಿಳುವಳಿಕೆಗೆ ಸಂತೋಷಹೊಂದಿ, ತನ್ನ ಮಗಳನ್ನು ಆತನಿಗೆ ಕೊಟ್ಟು ವಿವಾಹ ಮಾಡಿದ. ಆ ಚಿನ್ನದ ಇಲಿಯನ್ನು ಅಳಿಯನಿಗೇ ಕಾಣಿಕೆ ಕೊಟ್ಟ.





# ಬುದ್ಧಿಶಾಲಿನಿ

ಒಂದುದಿನ ಕಾಶ್ಮೀರದಲ್ಲಿ ಒಬ್ಬ ಮೀನು ಮಾರುವಾಕೆ ಅರಮನೆಗೆ ಹೋದಳು. ರಾಣಿ ಮೀನುಗಳನ್ನು ವ್ಯಾಪಾರಮಾಡುತ್ತಿರುವಾಗ ಬುಟ್ಟಿಯಲ್ಲಿದ್ದ ಮೀನೊಂದು ಜಿಗಿದಾಡುತಿತ್ತು. "ನನಗೆ ಹೆಣ್ಣುಮೀನು ಬೇಕು, ಅದೇನು ಗಂಡೋ ಹೆಣ್ಣೋ" ಎಂದು ಕೇಳಿದಳು ರಾಣಿ. ಕೂಡಲೇ ಆ ಮೀನು ನಕ್ಕಿತು. ಮೀನು ಮಾರುವಾಕೆ ತನ್ನ ಹತ್ತಿರವಿರುವುವೆಲ್ಲಾ ಗಂಡುಮೀನುಗಳೆಂದು ಹೇಳಿದಳು. ರಾಣಿ ಆಕೆಯನ್ನು ಕಳುಹಿಸಿಬಿಟ್ಟಳು. ಆದರೆ ತನ್ನನ್ನು ನೋಡಿ ಮೀನು ಪರಿಹಾಸಮಾಡಿತಲ್ಲಾ ಎಂಬ ಆಗ್ರಹದಿಂದ ರಾಣಿ ಕೋಪಗೃಹವನ್ನು ಪ್ರವೇಶಿಸಿದಳು.

ಮಹಾರಾಜರು ಆಕೆಯ ಕೋಪಕ್ಕೆ ಕಾರಣವರಿತು, ಮಂತ್ರಿಯನ್ನು ಕರೆದು "ಒಂದು ಸಾಮಾನ್ಯ ಮೀನು ರಾಣಿಯವರನ್ನು ನೋಡಿ ನಕ್ಕಿತಂತೆ. ಇದಕ್ಕೇನು ಕಾರಣವೋ ಒಂದು ತಿಂಗಳೊಳಗಾಗಿ ತಿಳಿದುಕೊಳ್ಳದಿದ್ದ ಪಕ್ಷಕ್ಕೆ ನಿಮ್ಮ ತಲೆ ತೆಗೆಯಿಸುವೆನು" ಎಂದು ಗಂಭೀರವಾಗಿ ನುಡಿದರು. ಆತನು ವ್ಯಸನಾಕ್ರಾಂತನಾಗಿ ಮನೆ ಸೇರಿಕೊಂಡನು. ಅನೇಕ ಮೇಧಾವಿಗಳನ್ನು, ಜೋತಿಷ್ಕರನ್ನು, ಯೋಗಿಗಳನ್ನು ಮಾಂತ್ರಿಕರನ್ನು ತನ್ನ ಮನೆಗೆ ಬರಮಾಡಿಕೊಂಡು "ಮೀನೊಂದು ಮಹಾರಾಣಿಯವರನ್ನು ನೋಡಿ ನಗಲು ಕಾರಣವೇನಿರಬಹುದು?" ಎಂದು ಕೇಳಿದ.

ಒಬ್ಬರಿಗೂ ಕಾರಣ ತಿಳಿಯಲಿಲ್ಲ. ಮಂತ್ರಿ ಮನೋವ್ಯಾಧಿಯಿಂದ ಹಾಸಿಗೆ ಹತ್ತಿದ.

ಮಂತ್ರಿಕುಮಾರನು ಚುರುಕುಬುದ್ಧಿಯುಳ್ಳವನು. ತಂದೆಗೆ ಬೇಕಾದ ಸಮಾಧಾನ ಪಡೆಯಲು ತಾನೇ ಸ್ವತಃ ಪ್ರಯಾಣಬೆಳೆಸಿದ. ಒಂದುದಿನ ಹಾದಿಯಲ್ಲಿ ಆತನಿಗೆ ರೈತನೊಬ್ಬನು ಸಿಕ್ಕಿದ. ಆ ರೈತನೊಂದಿಗೆ ಮಂತ್ರಿಕುಮಾರನು ನಡೆಯುತ್ತಿದ್ದ. ಸ್ವಲ್ಪ ದೂರ ಹೋದನಂತರ ಮಂತ್ರಿಕುಮಾರನು ರೈತನೊಂದಿಗೆ "ನೀವು ಹೀಗೆ ನಡೆಯುವುದಕ್ಕಿಂತಲೂ, ಒಬ್ಬರ ಭುಜದಮೇಲೆ ಒಬ್ಬರನ್ನು

ಕೆ. ವೆಂಕಟಕೃಷ್ಣ

ಹೊತ್ತುಕೊಂಡುಹೋದರೆ ದಾರಿ ಬೇಗ ಸಾಗುವುದು; ಏನು ಹೇಳುವಿರಿ?" ಎಂದು ಕೇಳಿದ.

ರೈತನು ಸಮಾಧಾನವೇನೂ ಕೊಡಲಿಲ್ಲ. ತನ್ನೊಂದಿಗೆ ಬರುತ್ತಿದ್ದ ತರುಣನಿಗೆ ಬುದ್ಧಿ ನೆಟ್ಟಗಿಲ್ಲವೆಂದು ಆತನು ಭಾವಿಸಿದ.

ಮತ್ತಿಷ್ಟು ದೂರ ಹೋಗಲು ಮಂತ್ರಿ ಕುಮಾರನು ಕೊಯ್ಲಿಗೆ ಸಿದ್ಧವಾಗಿದ್ದ ಬೆಳೆಯನ್ನು ಕಂಡು "ಇದನ್ನಿನ್ನೂ ತಿಂದು ಹಾಕಲಿಲ್ಲವೇಕೆ?" ಎಂದು ಕೇಳಿದ. ರೈತನು ಅದಕ್ಕೆ ಜವಾಬನ್ನು ಕೊಡಲಿಲ್ಲ. ಆತನ ಸಂಶಯ ಮತ್ತಷ್ಟು ದೃಢವಾಯಿತು.

ಮುಂದೆ ಅವರಿಗೊಂದು ಅಡವಿ ಸಿಕ್ಕಿತು. ಮಂತ್ರಿಕುಮಾರನು ತನ್ನ ಕತ್ತಿಯನ್ನು ರೈತನಿಗೆ ಕೊಟ್ಟು, "ಇದನ್ನು ತೆಗೆದುಕೊಂಡು ಹೋಗಿ ಎರಡು ಕುದುರೆಗಳನ್ನು ತರುವೆಯಾ? ನಮಗೆ ಉಪಯೋಗವಾಗಬಹುದು. ಕತ್ತಿಯನ್ನು ಕಳೆದುಬಿಟ್ಟೀಯೇ? ಅದು ತುಂಬಾ ಬೆಲೆ ಬಾಳುವುದು" ಎಂದ. ಅದಕ್ಕೂ ರೈತನು ಯಾವ ಉತ್ತರವನ್ನೂ ಹೇಳಲಿಲ್ಲ. ತನ್ನೊಂದಿಗೆ ಈರೀತಿ ಮಾತನಾಡುತ್ತಿರುವ ಯುವಕನಿಗೆ ನಿಜವಾಗಿ ಮೆದುಳು ಕೆಟ್ಟಿದೆ ಎಂದು ದೃಢಮಾಡಿಕೊಂಡ.

ಅಡವಿಯನ್ನು ದಾಟಿ ಅವರಿಬ್ಬರೂ ಒಂದು ನಗರವನ್ನು ಪ್ರವೇಶಿಸಿದರು. ಆ ನಗರದಲ್ಲಿ ಅವರನ್ನು ಯಾರೂ ಮಾತನಾಡಿಸಲಿಲ್ಲ. ಮಂತ್ರಿಕುಮಾರನು ಸುತ್ತಲೂ ಒಂದುಸಾರಿ ದೃಷ್ಟಿ ಬೀರಿ "ಇದೆಷ್ಟು ದೊಡ್ಡ ಸುಡುಗಾಡು" ಎಂದ. ರೈತನು ಈ ಮಾತು ಕೇಳಿ ತನ್ನಪಾಡಿಗೆ ತಾನು ನಕ್ಕನು. ಹೀಗೆಯೇ ಮುಂದೆ ನಗರವನ್ನು ದಾಟಿದ ತರುವಾಯ ಅವರಿಬ್ಬರೂ ಒಂದು ಶ್ಮಶಾನದ ಹತ್ತಿರಕ್ಕೆ ಬಂದರು. ಶ್ಮಶಾನದಲ್ಲಿ ಶವ ದಹನವಾಗುತಿತ್ತು. ಮರಣಿಸಿದಾತನ ನೆಂಟರಿಷ್ಟರು ಬಂದು ಹೋಗುವವರಿಗೆಲ್ಲರಿಗೂ ಬಗೆಬಗೆಯ ತಿಂಡಿತಿನಸುಗಳನ್ನು ಕೊಡುತ್ತಿದ್ದರು. ಹಾಗೇ ಅವರಿಬ್ಬರಿಗೂ ಕೊಟ್ಟರು! ಮಂತ್ರಿ ಕುಮಾರನು ಎರಡು ಹೆಜ್ಜೆಮುಂದೆಹಾಕಿ "ಇದೆಂತಹ ದಿವ್ಯವಾದ ನಗರ" ಎಂದ.




ಮತ್ತಷ್ಟು ದೂರ ನಡೆಯಲು ಅವರಿಗೆ ತೊರೆಯೊಂದು ಅಡ್ಡಬಂತು. ರೈತನು ತನ್ನ ಎಕ್ಕಡಗಳನ್ನು ಕೈಗೆ ತೆಗೆದುಕೊಂಡು ಧೋತರ



ವನ್ನು ಮೇಲಕ್ಕೆತ್ತಿಕೊಂಡು, ಆ ತೊರೆಯನ್ನು ದಾಟಿದನು. ಆದರೆ ಮಂತ್ರಿಕುಮಾರನು ಮಾತ್ರ ನೆಟ್ಟಗೆ ಮುಂದೆ ನಡೆದ.

ಅಂತೂ ಅವರಿಬ್ಬರೂ ರೈತನು ವಾಸಿಸುತ್ತಿದ್ದ ಗ್ರಾಮವನ್ನು ಸೇರಿಕೊಂಡರು. ತನ್ನ ಸಂಗಡ ಬಂದ ಯುವಕನು ಹುಚ್ಚನಾದರೂ ಬಹುದೂರ ಜೊತೆಯಾಗಿ ಬಂದನಾದುದರಿಂದ ಆತನನ್ನು ತನ್ನ ಮನೆಗೆ ಊಟಕ್ಕೆ ಬರುವಂತೆ ಆಹ್ವಾನಿಸಿದ. ಅದಕ್ಕೆ ಮಂತ್ರಿಕುಮಾರನು "ಅಗತ್ಯವಾಗಿ ಬರುತ್ತೇನೆ. ಆದರೆ ನಿಮ್ಮ ಮನೆಯ ತೊಲೆಗಳು ಬಲವಾಗಿವೆಯೋ ಇಲ್ಲವೋ ಆಲೋಚಿಸಿ ಮತ್ತೆ ಕೂಗಿ" ಎಂದ.

ಈ ಹುಂಬನೊಂದಿಗೆ ಮಾತನಾಡುವುದೇ ತಪ್ಪು ಎಂದುಕೊಂಡು ರೈತನು ತಾನೊಬ್ಬನೇ ಮನೆಗೆ ಹೋದ. ತನ್ನ ಹೆಂಡತಿ ಮಗಳೊಂದಿಗೆ ತನ್ನೊಂದಿಗೆ ಬಂದಿದ್ದ ಯುವಕನ ವಿಷಯವನ್ನು ವಿವರಿಸಿದ. ರೈತನ ಮಗಳು ಬುದ್ಧಿಶಾಲಿನಿ; ಸೂಕ್ಷ್ಮಗ್ರಾಹಿ. ತಂದೆಯ ಮಾತುಗಳನ್ನೆಲ್ಲಾ ಕೇಳಿ ಆಕೆ ಇಂತೆಂದಳು:

"ಅಪ್ಪಾ, ಆ ಹುಡುಗನು ಮಹಾಮೇಧಾವಿ. ಆದರಿಂದಲೇ ನಿನಗೆ ಆತನ ಮಾತುಗಳು ಅರ್ಥವಾಗಲಿಲ್ಲ. ಒಬ್ಬರ ಭುಜದಮೇಲೊಬ್ಬರನ್ನು ಹೊತ್ತುಕೊಂಡು ಹೋಗೋಣವೆಂದರೆ ಒಬ್ಬರಿಗೊಬ್ಬರು ಕಥೆಗಳನ್ನು ಹೇಳಿಕೊಂಡು ನಡೆಯೋಣ ಎಂದು ಆತನ ಉದ್ದೇಶ. 'ಹೊಲವನ್ನು ತಿಂದುಹಾಕಲಿಲ್ಲವೇನಪ್ಪಾ' ಎಂದರೆ ರೈತರಿಗೆ ಸಾಮಾನ್ಯವಾಗಿರುವ ಸಾಲಗಾರರು ಬೆಳೆಯನ್ನು ಕಿತ್ತುಕೊಳ್ಳದೆ ಇನ್ನೂ ಉಳಿಸಿರುವರಲ್ಲಾ ಎಂದರ್ಥ. ಕತ್ತಿ ತೆಗೆದುಕೊಂಡು ಹೋಗಿ ಎರಡು ಕುದುರೆಗಳನ್ನು ತರುವಂತೆ ಹೇಳಿದುದರ ಅರ್ಥವೇನೆಂದರೆ ಎರಡು ಕೋಲುಗಳನ್ನು ಕತ್ತರಿಸಿ ತಾ ಅಂತಲೂ ಅಡವಿಯಲ್ಲಿ ಏನಾದರೂ ಕಷ್ಟ ಬಂದರೆ ಅವುಗಳಿಂದ ಸಹಾಯವಾಗುವುದೆಂದೂ ಆತನ ಎಣಿಕೆ. ನಗರದಲ್ಲಿ ಯಾರೂ ಮಾತನಾಡಿಸದಿರಲು ಆತನಿಗೆ ಅದು ಸುಡುಗಾಡಿನಂತೆ ತೋರಿತು. ಅದೇ ಶ್ಮಶಾನದಲ್ಲಿ ಆತಿಥ್ಯ ಸಿಗಲು ಅದನ್ನು ಪಟ್ಟಣವೆಂದು ಕರೆದರು. ನೀರಿನಲ್ಲಿ ಏನಿರುವುದೋ ತಿಳಿಯದಾದುದರಿಂದ ತೊರೆಯನ್ನು ದಾಟುವಾಗ ಆತನು ಪಾದರಕ್ಷೆಗಳನ್ನು ಕಳಚಲಿಲ್ಲ;





ಧೋತರವನ್ನು ಮೇಲಕ್ಕೆ ಸಿಕ್ಕಿಸಿಕೊಳ್ಳಲಿಲ್ಲ. ಆತನು ತುಂಬಾ ಬುದ್ಧಿವಂತನಿರಬೇಕು. ನಮ್ಮ ಮನೆಯ ಗಳುಗಳು ತುಂಬಾ ಬಲವಾದುದೆಂದೇ ಹೇಳಿದ್ದರೆ ತಪ್ಪದೆ ಬರುತ್ತಿದ್ದರು. ತಾನೊಬ್ಬನು ಬೇರೆ ಬಂದರೆ ಮನೆ ಸಾಲುವುದೋ ಇಲ್ಲವೋ ತಿಳಿದುಕೊಳ್ಳಲು ಆತನು ಆ ರೀತಿ ನುಡಿದಿರಲಿಕ್ಕೆ ಸಾಕು. ನಾನು ಆತನಿಗೆ ಆತಿಥ್ಯವನ್ನು ಕೊಡುತ್ತೇನೆ."

ರೈತನ ಮಗಳು ಒಂದು ಸಣ್ಣ ಬಟ್ಟಲಿನ ತುಂಬಾ ತುಪ್ಪ, ಹನ್ನೆರಡು ಚಪಾತಿಗಳು, ಒಂದು ಕುಡಿಕೆಯ ತುಂಬಾ ಹಾಲು, ಮತ್ತು ಒಂದು ಕಾಗದವನ್ನು ನೌಕರನ ಹತ್ತಿರ ಕೊಟ್ಟು, ಅವುಗಳನ್ನು ಊರಾಚೆಯಿದ್ದ ಮಂತ್ರಿಕುಮಾರನಿಗೆ ಕಳುಹಿಸಿದಳು. ಆ ಕಾಗದದಲ್ಲಿ, 'ಮಿತ್ರನೇ, ಚಂದಮಾಮ ಸಂಪೂರ್ಣನು. ವರ್ಷಕ್ಕೆ ಹನ್ನೆರಡು ಮಾಸಗಳು. ಸಮುದ್ರನು ತೀರವನ್ನು ದಾಟಲು ಪ್ರಯತ್ನಿಸುತ್ತಿದ್ದಾನೆ' ಎಂದಿತ್ತು. ರೈತನ ಮಗಳು ಕೊಟ್ಟ ವಸ್ತುಗಳನ್ನು ನೌಕರರು ಮಂತ್ರಿಕುಮಾರನ ಬಳಿಗೆ ತೆಗೆದುಕೊಂಡು ಹೋಗುತ್ತಿರಲು, ನೌಕರನ ಕುಮಾರನು ದಾರಿಯಲ್ಲಿ ಸಿಕ್ಕಿ, ತಂದೆಯ ಕೈಯಿಂದ ಕೆಲವು ಪದಾರ್ಥಗಳನ್ನು ಕಿತ್ತುಕೊಂಡನು. ನೌಕರನು ಉಳಿದುದನ್ನು ತೆಗೆದುಕೊಂಡು ಹೋಗಿ ಮಂತ್ರಿಕುಮಾರನಿಗೆ ಒಪ್ಪಿಸಿದನು. ಮಂತ್ರಿಕುಮಾರನು ಫಲಾಹಾರ ಮುಗಿಸಿ, ರೈತನ ಮಗಳು ಕಳುಹಿಸಿದ ಚೀಟಿಗೆ ಈ ರೀತಿ ಸಮಾಧಾನವನ್ನು ಬರೆದು ನೌಕರನ ಮುಖಾಂತರ ಕಳುಹಿಸಿದನು. 'ಸ್ನೇಹಿತಳೇ, ಅಮಾವಾಸ್ಯೆಯ ಚಂದ್ರನಾದುದರಿಂದ ಆತನ ಸುಳಿವೇ ಕಾಣಿಸದು. ವರ್ಷಕ್ಕೆ ಹನ್ನೊಂದು ತಿಂಗಳೆಂದೇ ನನಗೆ ತೋರುವುದು. ಸಮುದ್ರದ ನೀರು ಅರ್ಧಭಾಗ ಕಡಿಮೆಯಾಗಿದೆ'

ಈ ಉತ್ತರವನ್ನು ನೋಡಿದ ಕೂಡಲೇ ರೈತನ ಮಗಳು ನೌಕರನನ್ನು ಕೂಗಿ "ಎಲವೋ ನಾನು ಕೊಟ್ಟ ತುಪ್ಪ, ಒಂದು ಚಪಾತಿ, ಅರ್ಧಮಡಿಕೆ ಹಾಲು ಏನಾಯಿತು?" ಎಂದು ಕೇಳಿದಳು. ಕಳ್ಳತನ ಹೊರಬಿತ್ತು.

ತರುವಾಯ ಮುದಿ ರೈತನು ಹೋಗಿ ಮಂತ್ರಿಕುಮಾರನನ್ನು ತನ್ನ ಮನೆಗೆ ಕರೆದುಕೊಂಡು ಬಂದನು. ಮಂತ್ರಿಕುಮಾರನೂ,

ರೈತನ ಮಗಳೂ ಬಹಳ ಹೊತ್ತು ಮಾತನಾಡುತ್ತಿದ್ದರು. ಕೊನೆಗೆ ಮಂತ್ರಿಕುಮಾರನು ರೈತನ ಮಗಳೊಂದಿಗೆ ರಾಣಿಯನ್ನು ಕಂಡು ಮೀನು ನಕ್ಕ ವಿಷಯವನ್ನು ತಿಳಿಸಿ, "ಆ ಮೀನು ಹಾಗೆ ನಗುವುದಕ್ಕೆ ಕಾರಣವೇನಿರಬಹುದು?" ಎಂದು ಕೇಳಿದನು.

"ರಾಣಿಯವರ ಅಂತಃಪುರದಲ್ಲಿ ಯಾರಿಗೂ ತಿಳಿಯದಂತೆ ಒಬ್ಬ ಪುರುಷನು ವಾಸಿಸುತ್ತಿರಬೇಕು" ಎಂದಳಾಕೆ. ಮಂತ್ರಿಕುಮಾರನು ಬೆರಗಾಗಿ "ಇದನ್ನು ರುಜುವಾತು ಮಾಡಲು ನೀನು ಸಹಾಯ ಮಾಡುವೆಯಾ? ನನ್ನ ತಂದೆಯವರ ಪ್ರಾಣವನ್ನು ಉಳಿಸಿ ಪುಣ್ಯಕಟ್ಟಿಕೋ" ಎಂದ.

ಹಾಗೆಯೇ ಆಗಲೆಂದು ಒಪ್ಪಿಕೊಂಡು ರೈತನ ಮಗಳು ಮಂತ್ರಿಕುಮಾರನೊಂದಿಗೆ ಹೊರಟಳು. ಇಬ್ಬರೂ ಮಂತ್ರಿಯ ಮನೆಗೆ ಬಂದರು. ರೈತನ ಮಗಳ ಮಾತನ್ನು ಕೇಳಿ ಮಂತ್ರಿ ಆಶ್ಚರ್ಯಪಟ್ಟು, ಸಂತೋಷಗೊಂಡು, ರಾಜನ ಬಳಿಗೆ ಹೋಗಿ ಮೀನು ನಗಲು ಕಾರಣವನ್ನು ತಿಳಿಸಿದನು.

"ಇದನ್ನು ಹೇಗೆ ರುಜವಾತು ಪಡಿಸುವೆ?" ಪ್ರಶ್ನಿಸಿದರು ಮಹಾರಾಜರು. "ಅರಮನೆಯಲ್ಲಿ ಒಂದು ಅಗಲವಾದ ಕಂದಕವನ್ನು ತೋಡಿಸಿ. ರಾಣಿಯವರ ಪರಿಚಾರಿಕೆಯರೆಲ್ಲಾ ಅದನ್ನು ಹಾರಬೇಕೆಂದು ಆಜ್ಞೆಮಾಡಿ" ಎಂದು ಸಲಹೆ ಕೊಟ್ಟಳು ರೈತನ ಮಗಳು.

ಅದರಂತೆಯೇ ಮಹಾರಾಜರು ಕಂದಕ ತೋಡಿಸಿ, ಅಂತಃಪುರದ ದಾಸಿಯರೆಲ್ಲರೂ ಅದನ್ನು ಹಾರುವಂತೆ ಆಜ್ಞೆ ಮಾಡಿದರು. ಯಾರಿಂದಲೂ ಹಾರಲಾಗಲಿಲ್ಲ. ಒಬ್ಬಳು ಮಾತ್ರ ಧೈರ್ಯದಿಂದ ಹಾರಿದಳು.

"ಆಕೆ ಸ್ತ್ರೀಯಲ್ಲ; ಪರೀಕ್ಷಿಸಿ ನೋಡಿ" ಎಂದಳು ರೈತನ ಮಗಳು. ಆಕೆ ಹೇಳಿದ ಮಾತು ಸತ್ಯವಾಯಿತು. ಆತ ಪುರುಷ.

ಇಂತಹ ಮೋಸವನ್ನು ಹೊರಗೆಡವಿದುದಕ್ಕೆ ರಾಣಿ ತುಂಬಾ ಸಂತೋಷಗೊಂಡಳು. ಆ ಪುರುಷನನ್ನು ಶಿಕ್ಷಿಸಲಾಯಿತು.

ರಾಜನು ಮಂತ್ರಿಗೆ ಭಾರಿ ಬಹುಮಾನವನ್ನು ಕೊಟ್ಟನು. ಮಂತ್ರಿಕುಮಾರನಿಗೂ ರೈತನ ಮಗಳಿಗೂ ವಿವಾಹ ನಡೆಯಿತು.






## 12

[ಸಮರಸೇನನು ಪಲಾಯನ ಮಾಡುತ್ತ ಕುಂಭಾಂಡನು ತಮ್ಮನ್ನು ಹಿಂಬಾಲಿಸುತ್ತಿರುವನೆಂದು ಗ್ರಹಿಸಿದ. ಒಂದು ಗುಹೆಯಲ್ಲಿರುವ ಸಿಂಹವನ್ನು ಹೊರಕ್ಕೆ ಅಟ್ಟಿ, ತನ್ನ ಸೈನಿಕರನ್ನು ಮರದಮೇಲೆ ಕಾವಲಿರಿಸಿ ಒಬ್ಬಂಟಿಗನಾಗಿ ಗುಹೆಯಲ್ಲಿ ಪ್ರವೇಶಿಸಿದ. ಗುಹೆಯ ಹಿಂಭಾಗದಲ್ಲಿದ್ದ ರಹಸ್ಯದ್ವಾರದಿಂದ ಇಬ್ಬರು ಬಂದು ಆತನನ್ನು ಬಂಧಿಸಿದರು.]

ಹಠಾತ್ತನೆ ಇಬ್ಬರು ಬಲಿಷ್ಠರು ತನ್ನಮೇಲೆ ಹಾರಿಬೀಳಲು ಸಮರಸೇನನು ತಬ್ಬಿಬ್ಬಾದನು. ಆತನ ಬಾಯಿಂದ ಮಾತು ಹೊರಡದಾಯ್ತು. ಇಷ್ಟರಲ್ಲಿ ಗುಹೆಯ ಹೊರಭಾಗದಿಂದ ಭಯಂಕರವಾದ ಸಿಂಹಗರ್ಜನೆ ಕೇಳಿಬಂದಿತು. ಮರುಕ್ಷಣವೇ ಸಮರಸೇನನನ್ನು ಬಂಧಿಸಿದ ವ್ಯಕ್ತಿಗಳು ಆತನನ್ನು ತಮ್ಮ ಹೆಗಲಮೇಲೇರಿಸಿಕೊಂಡು ಓಡಲು ಪ್ರಾರಂಭಿಸಿದರು.

ಸಮರಸೇನನು ಮತ್ತೇನೂ ಮಾಡಲಾರದೆ ಆ ಪ್ರದೇಶವನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸುತಲಿದ್ದನು. ಅದೊಂದು ಕಡಿದಾದ ಕಣಿವೆ. ತನ್ನನ್ನು ಬಂಧಿಸಿದ ವ್ಯಕ್ತಿಗಳು ಬೆಟ್ಟದಿಂದ ಕೆಳಕ್ಕೆ ಇಳಿಯುತ್ತಿದ್ದರು. ದೂರದಲ್ಲಿ ಎಲ್ಲೋ ಒಂದು ಕಡೆ ಮಿಣುಕುಮಿಣುಕೆಂದು ದೀಪವೊಂದು ಉರಿಯುತ್ತಿದ್ದುದು ಕಾಣಿಸಿತು.

"ನೀವು ಯಾರು? ನನ್ನನ್ನು ಏಕೆ ಬಂಧಿಸಿದಿರಿ?" ಎಂದು ಪ್ರಶ್ನೆಮಾಡಿದ ಸಮರಸೇನ.

ಆ ಮಾತುಗಳನ್ನು ಕೇಳಿ ಆ ವ್ಯಕ್ತಿಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು, ಯಾವ ಸಮಾಧಾನವನ್ನೂ ಕೊಡದೆ ಸುಮ್ಮನಿದ್ದುಬಿಟ್ಟರು. ಸಮರಸೇನನು ಸುಮ್ಮನಾಗದೆ ಮತ್ತೆ ಅದೇ ಪ್ರಶ್ನೆ ಹಾಕಿದ. ಆಗ ಅವರ





ಕರೆದುಕೊಂಡು ಬರುತ್ತಿರುವವರು ದಾರಿಬಿಡಿ" ಎಂದು ಗಟ್ಟಿಯಾಗಿ ಕೂಗಿ ಹೇಳಿದ. ಅದಕ್ಕೆ ಉತ್ತರವಾಗಿ ಮತ್ತೆ ಕೆಲವು ಧ್ವನಿಗಳು ಕೇಳಿ ಬಂದವು. ಇದೆಲ್ಲವೂ ಸಮರಸೇನನನ್ನು ಭಯಾಶ್ಚರ್ಯಗಳಲ್ಲಿ ಮುಳುಗಿಸಿತು.

ಸಮರಸೇನನನ್ನು ಆ ವ್ಯಕ್ತಿಗಳು ಒಂದು ಮನೆಗೆ ಕರೆದೊಯ್ದರು. ಬಾಗಿಲನ್ನು ತಟ್ಟಿದ ತಕ್ಷಣ ಬಾಗಿಲು ತೆರೆಯಿತು. ಸಮರಸೇನನನು ಒಂದು ಕೋಣೆಗೊಯ್ದು ಆತನ ಕೈಕಾಲು ಗಳನ್ನು ಮತ್ತೆ ಹಗ್ಗಗಳಿಂದ ಬಿಗಿದು ಕಟ್ಟಿ "ಈ ರಾತ್ರಿ ನಿನಗಿದೇ ಮಲಗುವ ಕೋಣೆ. ಬೆಳಗಾದ ನಂತರ ಅಯ್ಯನವರಿಗಿದೆ ಹೋಳಿ ಹಬ್ಬ" ಎಂದು ವ್ಯಂಗ್ಯವಾಗಿ ನುಡಿದು ಅಲ್ಲಿಂದ ಹೊರಟು ಹೋದರು.

ಸಮರಸೇನನಿಗೆ ಆ ರಾತ್ರಿ ಎಷ್ಟೇ ಪ್ರಯತ್ನ ಮಾಡಿದರೂ ನಿದ್ದೆ ಬರಲಿಲ್ಲ. ತನ್ನನ್ನು ಈ ಹೊಸಬರು ಏಕೆ ಬಂಧಿಸಿದರೋ ಆತನಿಗೆ ಅರ್ಥವಾಗಲಿಲ್ಲ. ಈ ದ್ವೀಪದಲ್ಲಿ ತಾನೂ ಕುಂಭಾಂಡನೂ ಮಾತ್ರವಲ್ಲದೆ ತಮ್ಮಂತಹ ಮತ್ತೆ ಕೆಲವು ನಾಗರೀಕ ಜಾತಿಯವರು ವಾಸ ಮಾಡುತ್ತಿರುವರೆಂದು ಆತನು ಗ್ರಹಿಸಿದನು. ಅವರ ವೇಷಭಾಷೆಗಳಿಂದ ಅವರು ಕಾಡುಜನ ರಲ್ಲವೆಂದು ದೃಢವಾಯಿತು.

ಅನೇಕಾನೇಕ ಯೋಚನೆಗಳಿಂದ ಸಮರ ಸೇನನು ಅಂದು ರಾತ್ರಿಯನ್ನೆಲ್ಲಾ ಆ ಕತ್ತಲೆ ಕೋಣೆಯಲ್ಲೇ ಕಳೆದನು. ಕೋಳಿಯ ಕೂಗು ಬೆಳಗಾಯಿತೆಂದು ಸೂಚಿಸಿತು. ತುಸ

ಲ್ಲೊಬ್ಬನು "ಅದೆಲ್ಲ ನಮ್ಮ ನಾಯಕನನ್ನು ಕೇಳಿದರೆ ಹೇಳುವನು" ಎಂದನು.

ಅವರೊಂದಿಗೆ ಸಂಭಾಷಣೆ ಮುಂದುವರಿ ಸುವುದರಿಂದ ಪ್ರಯೋಜನವಿಲ್ಲವೆಂದು ಅರಿತು ಕೊಂಡ ಸಮರಸೇನ.

ಕಣಿವೆಯನ್ನು ಪ್ರವೇಶಿಸಿದ ಕೂಡಲೇ ಆ ವ್ಯಕ್ತಿಗಳು ಸಮರಸೇನನನ್ನು ಕೆಳಕ್ಕೆ ಇಳಿಸಿ ಕೈಕಾಲುಗಳ ಕಟ್ಟುಗಳನ್ನು ಕಳಚಿದರು. ತಮ್ಮಿಬ್ಬರ ನಡುವೆ ಸಮರಸೇನನನ್ನು ನಡೆ ಯಿಸಿಕೊಂಡು ಹೋಗುತ್ತಿದ್ದರು.

ಹಾಗೆ ಕೊಂಚದೂರ ಹೋಗಲು ದೀಪದ ಕಾಂತಿ ಹತ್ತಿರವಾಯಿತು. ಮರದಮೇಲೇರಿ ಕಾವಲು ಕಾಯುತ್ತಾ ಕುಳಿತಿದ್ದ ಒಬ್ಬಾತನು "ನಮ್ಮ ಗೆಳೆಯರು ಯಾರನ್ನೋ ಬಂಧಿಸಿ



ಹೊತ್ತಾದನಂತರ ಗುಡಿಯ ಗಂಟೆಗಳ ಗಣ ಗಣ ಶಬ್ದ ಕೇಳಿಸಿತು. ಆ ಕೂಡಲೇ ಹೆಜ್ಜೆಯ ಸಪ್ಪಳ ಕೇಳಿಬಂದಿತು. ತಾನಿದ್ದ ಕೋಣೆಯ ಬಾಗಿಲು ಕಿರ್ರೆಂದು ತೆರೆದುಕೊಂಡಿತು.

ಸಮರಸೇನನು ಚಕಿತನಾಗಿ ಅತ್ತಕಡೆ ನೋಡಿದ. ಹೊಸಬರಿಬ್ಬರು ಖಡ್ಗಗಳನ್ನು ಕೈಯಲ್ಲಿ ಹಿಡಿದು ಸಮರಸೇನನನ್ನೇ ದುರುಗುಟ್ಟಿಕೊಂಡು ನೋಡುತ್ತಾ ಆತನ ಬಳಿಗೆ ಬಂದರು. ಸಮರಸೇನನು ಅವರನ್ನು ಕುರಿತು ಗಂಭೀರವಾಗಿ "ಈಗ ಮೊಳಗಿದುದು ದೇವಾಲಯದ ಗಂಟೆಗಳೇ?" ಎಂದು ಕೇಳಿದ.

ಆಗ ಅವರಲ್ಲಿ ಒಬ್ಬನು "ಅವು ದೇವಾಲಯದ ಗಂಟೆಯ ಶಬ್ದವಲ್ಲ. ಸಾವಿನ ಕಹಳೆ. ವ್ಯಾಘ್ರದತ್ತನು ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರ ಕೊಡದಿದ್ದರೆ ಇಂದಿಗೆ ನಿನಗೆ ನೂರು ವರ್ಷ ತುಂಬಿದಂತೆಯೇ ಸರಿ" ಎಂದು ತೀಕ್ಷ್ಣವಾಗಿ ನುಡಿದ.

ವ್ಯಾಘ್ರದತ್ತನು ಯಾರು? ತನ್ನಿಂದ ಆತ ತಿಳಿದುಕೊಳ್ಳಬೇಕೆಂದಿರುವ ರಹಸ್ಯವೇನು? ಈ ಪ್ರಶ್ನೆಗಳಿಗೆ ತಟಕ್ಕನೆ ಉತ್ತರ ಸಿಕ್ಕಲಿಲ್ಲ. ಕ್ರೂರವಾಗಿ ತನ್ನನ್ನೇ ನೋಡುತ್ತಿದ್ದ ವ್ಯಾಘ್ರದತ್ತನ ಅನುಚರರನ್ನು ಕೇಳಿ ಏನೂ ಲಾಭವಿಲ್ಲವೆಂದು ಸಮರಸೇನನು ಗ್ರಹಿಸಿದ.

ಅವರು ಸಮರಸೇನನ ಕಟ್ಟುಗಳನ್ನು ಬಿಚ್ಚಿ ಕೋಣೆಯಿಂದ ಹೊರಕ್ಕೆ ಕರೆತಂದರು. "ನನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗುತ್ತಿರುವಿರಿ?" ಎಂದು ಸಮರಸೇನನು ಅವರನ್ನು ಕೇಳಲು "ನಮ್ಮ ನಾಯಕ ವ್ಯಾಘ್ರದತ್ತನ







ಬಳಿಗೆ ಕರೆದು ಕೊಂಡು ಹೋಗುತ್ತಿದ್ದೇವೆ. ಮೈಮೇಲೆ ಜ್ಞಾನವಿಟ್ಟುಕೊಂಡುಮಾತನಾಡು. ತಿಳಿಯಿತೋ?'' ಎಂದು ಗದರಿಸಿದರು.

ಸ್ವಲ್ಪದೂರ ನಡೆದನಂತರ ಅವರೆಲ್ಲರೂ ಒಂದು ಭಾರಿ ಭವನ ಪ್ರವೇಶಿಸಿದರು. ಅಲ್ಲಿ ಅನೇಕವಿಧವಾದ ಆಯುಧಗಳೂ, ಆಯುಧಗಳನ್ನು ಧರಿಸಿದ ಅನೇಕ ಜನರೂ ಕಾಣಿಸಿದರು. 'ಇವರು ಸೈನಿಕರಲ್ಲ, ಇವರ ಮಾತಿನ ರೀತಿ, ಉಡಿಗೆ ತೊಡಿಗೆಗಳನ್ನು ನೋಡಿದರೆ ದರೋಡೆಕೋರರಂತೆ ಕಾಣುತ್ತಿರುವರು' ಎಂದು ಅಂದುಕೊಂಡ ಸಮರಸೇನ.

ಅಷ್ಟರಲ್ಲಿ ಒಂದು ಭಾರಿ ಬಾಗಿಲು ತೆರೆಯಲ್ಪಟ್ಟಿತು. ಇದಿರು ಗಡೆಯಲ್ಲಿದ್ದ ಒಂದು ಎತ್ತರವಾದ ಪೀಠದಮೇಲೆ ವ್ಯಾಘ್ರದತ್ತನು ಮಂಡಿಸಿದ್ದ. ಸಮರಸೇನನನ್ನು ನೋಡಿದಾಕ್ಷಣ ಆತನು ಮುಗುಳುನಗೆಯನ್ನು ಬೀರಿ,

"ಸಮರಸೇನನೇ, ನಿನಗೆ ವ್ಯಾಘ್ರಮಂಡಲದ ಪರವಾಗಿ ಸ್ವಾಗತ ಬಯಸಿ ಅಭಿನಂದನೆಗಳನ್ನು ಸಲ್ಲಿಸುವೆನು. ಬಹುಶಃ ನಿನ್ನ ಮತ್ತು ನಮ್ಮ ಪೂರ್ವಿಕರು ಕುಂಡಲಿನೀದ್ವೀಪದಲ್ಲಿ ಒಂದೇ ಪಟ್ಟಣವಾಸಿಗಳಾಗಿರಬಹುದು. ಇಲ್ಲಿ, ಈ ಮಾಯಾದ್ವೀಪದಲ್ಲಿ, ಅವರ ಸಂತಾನವಾದ ನಾವಿಬ್ಬರೂ ಭೇಟಿಯಾಗುತ್ತಿರುವುದು ನಿನಗೆ ಸೋಜಿಗವಾಗಿ ಕಾಣಿಸುತ್ತಿಲ್ಲವೇ?'' ಎಂದು ಕೇಳಿದ.

ಸಮರಸೇನನಿಗೆ ತಾನು ಸೆರೆಯಾಳಾದಾಗಲಿಂದ ನಡೆಯುತ್ತಿದ್ದ ವಿದ್ಯಮಾನಗಳೆಲ್ಲವೂ ಅಚ್ಚರಿಯನ್ನುಂಟುಮಾಡುತ್ತಿದ್ದುದು ನಿಜವೇ ಹೌದು. ತನ್ನನ್ನು ಇವರು ಬಂಧಿಸಿದುದು ಏಕೋ ಆತನಿಗೆ ಅರ್ಥವಾಗಲಿಲ್ಲ. ಕುಂಡಲಿನೀದ್ವೀಪದ ಹೆಸರು ಹೇಳಿ, ತಮ್ಮ ಪೂರ್ವಿಕರ ನಿವಾಸಸ್ಥಳವನ್ನು ಸೂಚಿಸಿ ವ್ಯಾಘ್ರದತ್ತನು ಆಡಿದ ಮಾತುಗಳು, ಆತನ ಧೋರಣೆ ಅತ್ಯಾಶ್ಚರ್ಯವನ್ನುಂಟುಮಾಡಿತ್ತು.

"ನನಗೆ ಇಲ್ಲಿ ನಡೆಯುತ್ತಿರುವ ಪ್ರತಿಯೊಂದು ವಿಷಯವೂ ವಿಸ್ಮಯವನ್ನುಂಟುಮಾಡುತ್ತಿದೆ. ನನ್ನನ್ನು ನಿಮ್ಮ ತಂಡದವರು ಏಕೆ ಬಂಧಿಸಿದರು? ನಿಮ್ಮ ಹತ್ತಿರಕ್ಕೆ ನನ್ನನ್ನು ಕರೆದುಕೊಂಡು ಬಂದುದಾದರೂ ಏಕೆ? ನೀವು ಈ ದ್ವೀಪಕ್ಕೆ ಯಾವಾಗ ಬಂದಿರಿ? ಇವೆಲ್ಲವೂ ನನ್ನನ್ನು ಚಕಿತಗೊಳಿಸಿದೆ''







ಎಂದು ದಿಟ್ಟತನದಿಂದ ನುಡಿದ ಸಮರಸೇನ.

"ನೀನು ಆಶ್ಚರ್ಯಪಡಬೇಕಾದ ವಿಷಯವೇನಿಲ್ಲ. ಶಮನದ್ವೀಪದ ರಾಜನಾದ ಶಾಕ್ತೇಯನು ಅನೇಕ ದೇಶಗಳಮೇಲೆ ದಂಡೆತ್ತಿ ಹೋಗಿ ಕೊಳ್ಳೆಹೊಡೆದಂತೆ ನಮ್ಮ ಕುಂಡಲಿನೀದ್ವೀಪವನ್ನೂ ದೋಚಿಕೊಂಡ. ನಮ್ಮ ಪೂರ್ವಿಕರಲ್ಲಿ ದೃಢಕಾಯರಾದ ಕೆಲವರನ್ನು ಗುಲಾಮರನ್ನಾಗಿ ಮಾಡಿಕೊಂಡು, ಮತ್ತೆ ಹಲವಾರು ದ್ವೀಪಗಳನ್ನು ಕೊಳ್ಳೆಹೊಡೆಯಲು ಹಡಗುಗಳಲ್ಲಿ ಮುಂದೆ ಪ್ರಯಾಣ ಮಾಡಿದ. ಈ ದ್ವೀಪದಲ್ಲಿ ಆತನು ಮೃತ್ಯುವಶನಾದ ಅಂಶ ನಿನಗೆ ತಿಳಿದಿರಲೂ ಬಹುದು. ಗುಲಾಮರಾಗಿ ಬಂಧಿಸಲ್ಪಟ್ಟ ನಮ್ಮ ಪೂರ್ವಿಕರು ಅಂದಿನಿಂದ ಸ್ವತಂತ್ರರಾಗಿ, ಸ್ವೇಚ್ಛೆಯಾಗಿ, ಈ ಪ್ರಾಂತದಲ್ಲಿ ಜೀವಿಸಲು ಪ್ರಾರಂಭಿಸಿದರು. ಅವರು ಸ್ವತಂತ್ರರಾಗಲು ಶಾಕ್ತೇಯನ ಶಿಷ್ಯರಾದ ಮಾಂತ್ರಿಕರಿಬ್ಬರ ನಡುವೆ ಉಂಟಾದ ದ್ವೇಷ ಬಹುಮಟ್ಟಿಗೆ ಸಹಕಾರಿಯಾಯಿತು. ಅವರನ್ನು ನೀನು ಬಲ್ಲೆಯಷ್ಟೇ?" ಎಂದು ಕೇಳಿದ ವ್ಯಾಘ್ರದತ್ತ.

"ಬಲ್ಲೆ." ಎಂದು ಉತ್ತರವಿತ್ತ ಸಮರಸೇನ. ಆತನಿಗೆ ವ್ಯಾಘ್ರದತ್ತನು ಹೇಳುತ್ತಿದ್ದುದೆಲ್ಲಾ ನಿಜವಾಗಿ ತೋರುತ್ತಿದ್ದರೂ, ಕೌತುಕವನ್ನುಂಟು ಮಾಡುತಿತ್ತು.

"ಹಾಗಾದರೆ ಈಗ ಹೇಳು. ಆ ಶಾಕ್ತೇಯನ ತ್ರಿಶೂಲ ಎಲ್ಲಿದೆ? ಕಾಳಿಕಾದೇವಿಯಿಂದ ಪ್ರಸಾದಿತವಾದ ಆ ತ್ರಿಶೂಲದ



ಮಹಿಮೆ ನೀನು ಕೇಳಿರಬಹುದು; ಸತ್ಯ ಹೇಳು" ಎಂದು ವ್ಯಾಘ್ರದತ್ತನು ನುಡಿದ.

ಆ ಪ್ರಶ್ನೆ ಕೇಳಿ ಸಮರಸೇನನು ಗರಬಡಿದವನಂತೆ ನಿಂತುಬಿಟ್ಟ. ವ್ಯಾಘ್ರದತ್ತನು ಹೇಳಿದ ಶಮನದ್ವೀಪದ ರಾಜನಾದ ಶಾಕ್ತೇಯನ ವಿಷಯ ಯಾವುದೂ ಸಮರಸೇನನಿಗೆ ತಿಳಿದಿರಲಿಲ್ಲ. ಚತುರ್ನೇತ್ರನು ತಮ್ಮ ಗುರುವಾದ ಶಾಕ್ತೇಯನನ್ನು ಕುರಿತು ಕೆಲವಾರು ವಿಷಯಗಳನ್ನು ಹೇಳಿದುದುಂಟು. ಶಾಕ್ತೇಯನು ಕುಂಡಲಿನೀದ್ವೀಪವನ್ನು ದೋಚಿಕೊಂಡ ವಿಷಯ ಆತನು ಕೇಳಿರಲಿಲ್ಲ. ಕಾಳಿಕಾದೇವಿ ಶಾಕ್ತೇಯನಿಗೆ ಪ್ರಸಾದಿಸಿದ ತ್ರಿಶೂಲದ ಸಂಗತಿಯನ್ನೂ ಆತನು ಅರಿಯ.

"ವ್ಯಾಘ್ರದತ್ತ, ನಿಮ್ಮ ಪ್ರಶ್ನೆಗೆ ನಾನು









ಉತ್ತರಕೊಡುವ ಪರಿಸ್ಥಿಯಲ್ಲಿಲ್ಲ. ನೀವು ನನ್ನನ್ನು ತಪ್ಪಾಗಿ ಬಂಧಿಸಿರಬಹುದು. ಶಾಕ್ತೇಯನನ್ನಾಗಲೀ, ಆತನಿಗೆ ಕಾಳಿಕಾದೇವಿ ಪ್ರಸಾದಿಸಿದ ತ್ರಿಶೂಲದ ವಿಷಯವಾಗಲೀ ನಾನರಿಯೆ" ಎಂದ ಸಮರಸೇನ.

ವ್ಯಾಘ್ರದತ್ತನು ಸಮರಸೇನನ ಈ ಉತ್ತರ ಕೇಳಿ ಸಿಡಿದೆದ್ದ. "ನೀನು ಏನೂ ಅರಿಯದವನಂತೆ ನಟಿಸಿ ನನ್ನನ್ನು ಮೋಸಗೊಳಿಸಲಾರೆ. ನಾಳೆ ಪ್ರಾತಃಕಾಲ ಹತ್ತು ಗಂಟೆಯ ವರೆವಿಗೆ ನಿನಗೆ ಅವಧಿ ಕೊಟ್ಟಿದ್ದೇನೆ. ನಿಜ ನುಡಿಯುವುದು ನಿನಗೆ ಶ್ರೇಯಸ್ಕರ. ಇಲ್ಲದಿದ್ದರೆ ನಿನಗೆ ಚಿತ್ರಹಿಂಸೆ ಮಾಡಿ, ಭದ್ರಕಾಳಿಗೆ ಬಲಿ ಕೊಡುವೆನು" ಎಂದು ಕರ್ಕಶ ಕಂಠದಿಂದ ನುಡಿದ ವ್ಯಾಘ್ರದತ್ತ.

ಸಮರಸೇನನು ದಿಗ್ಭ್ರಮೆಗೊಂಡನು. ತಾನರಿಯದ ವಿಷಯವನ್ನು ಹೇಳುವಂತೆ ಬಲವಂತಪಡಿಸುತ್ತಿರುವನೆಂಬ ಅಂಶವು ವ್ಯಾಘ್ರದತ್ತನು ಗ್ರಹಿಸಿಲ್ಲವೆಂದು ಸಮರಸೇನನು ಭಾವಿಸಿದನು. ಈಗ ತಾನು ನಿಜ ನುಡಿದರೂ ವ್ಯಾಘ್ರದತ್ತನು ಆ ಮಾತುಗಳನ್ನು ನಂಬುವಂತೆ ಕಾಣಲಿಲ್ಲ. ನಂಬಿಸಲೂ ಸಾಧ್ಯವಿಲ್ಲ.

ವ್ಯಾಘ್ರದತ್ತನ ಆಜ್ಞೆಯನ್ನು ಕೇಳಿ ಇಬ್ಬರು ಭಟರು ಸಮರಸೇನನನ್ನು ಅಲ್ಲಿಂದ ಒಂದು ಕತ್ತಲೆ ಕೋಣೆಗೆ ಕರೆದುಕೊಂಡು ಹೋಗಿ ಆತನ ಕೈಕಾಲುಗಳನ್ನು ಬಿಗಿದು ಕಟ್ಟಿ ಕೆಳಗೆ ಉರುಳಿಸಿದರು. ಆ ಕೋಣೆಯ ಒಂದು ಕಡೆ ಭೀಕರಾಕೃತಿಯ ವಿಗ್ರಹವಿತ್ತು. ಭಟರು ಆ



ವಿಗ್ರಹವನ್ನು ಸಮರಸೇನನಿಗೆ ತೋರಿಸಿ, "ನಾಳೆ ಹತ್ತುಗಂಟೆಯೊಳಗಾಗಿ ನಿಜ ನುಡಿಯುದಿದ್ದರೆ, ನೀನು ಈ ದೇವಿಗೆ ಬಲಿಯಾಗಬೇಕಾಗುವುದು. ಹುಷಾರ್" ಎಂದು ಎಚ್ಚರಿಕೆ ಕೊಟ್ಟು, ಅಲ್ಲಿಂದ ಕಣ್ಮರೆಯಾದರು.

ಸಮರಸೇನನು ಹಸಿವಿನ ಬಾಧೆಯಿಂದಲೂ ಕೈಕಾಲುಗಳ ಬಂಧನದಿಂದ ಆಗುತ್ತಿದ್ದ ನೋವಿನಿಂದಲೂ ಸಂಕಟಪಡುತ್ತಿದ್ದನು. ಬೆಳಗಾದ ಕೂಡಲೇ ತನಗೆ ಸಾವು ಖಂಡಿತವೆಂದು ಆತನಿಗೆ ತೋರಿತು. ಈ ಆಪತ್ತಿನ ಸಮಯದಲ್ಲಿ ಚತುರ್ನೇತ್ರನ ಹೊರತಾಗಿ ಯಾರೂ ತನಗೆ ಸಹಾಯ ಮಾಡುವರಿಲ್ಲವೆಂದು ತೋರಿತು. ಆದರೆ ಚತುರ್ನೇತ್ರನಿಗೆ ತಾನು ಈ ಅಸಹಾಯ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿರುವ ಸಮಾ



ಚಾರ ಹೇಗೆ ತಿಳಿಯಬೇಕು? ಯಾರು ತಿಳಿಸುವರು? ಸಮರಸೇನನು ಈರೀತಿ ಆಲೋಚನೆಗಳಿಂದ ರಾತ್ರಿ ಬಹಳ ಹೊತ್ತಿನ ವರೆವಿಗೂ ಅಲುಗಾಡದೆ, ಮಿಸುಕಾಡದೆ ಬಾಧೆಯನ್ನು ಸಹಿಸಿಕೊಂಡು ಕುಳಿತಿದ್ದ.

ಮಧ್ಯರಾತ್ರಿಯ ವೇಳೆಗೆ ಯಾರೋ ನಡೆದು ಬರುವ ಶಬ್ದವಾಯಿತು. ಬಾಗಿಲು ತೆಗೆದಂತೆ ಶಬ್ದವಾಯಿತು. ಅತ್ತಕಡೆ ದೃಷ್ಟಿ ಹಾಯಿಸಿದ ಸಮರಸೇನ. ಖಡ್ಗಗಳನ್ನು ಧರಿಸಿದ ಈರ್ವರು ಧೃಢಕಾಯರು ಒಳಗೆ ಪ್ರವೇಶಿಸಿದರು. ಬಹುಶಃ ತನ್ನನ್ನು ಹಿಂಸೆಪಡಿಸಲು ಬರುತ್ತಿರುವ ವ್ಯಾಘ್ರದತ್ತನ ಭಟರಿರಬಹುದೆಂದು ಭಾವಿಸಿದ ಸಮರಸೇನ.

ಆ ಹೊಸಬರು ನೆಟ್ಟಗೆ ಸಮರಸೇನನ ಸಮಿಾಪಕ್ಕೆ ಬಂದು ಆತನ ಕಟ್ಟುಗಳನ್ನು ಬಿಚ್ಚಿದರು. ಮುಂದೇನು ನಡೆಯುವುದೋ ಎಂದು ಬೆರಗು ಕಣ್ಣುಗಳಿಂದ ನೋಡುತ್ತಿದ್ದ ಸಮರಸೇನನನ್ನು ಕುರಿತು ತಮ್ಮ ಹಿಂದೆ ಬರಬೇಕೆಂದು ಸಂಜ್ಞೆಮಾಡಿ, ಅವರಿಬ್ಬರೂ ಮುಂದೆ ಮುಂದೆ ನಡೆದರು.

ಅವರು ಕೊಂಚದೂರ ನಡೆಯಲು, ಮುಂದುಗಡೆ ಅವರಿಗೆ ವ್ಯಾಘ್ರದತ್ತನ ಅನುಚರರು ಇಬ್ಬರು ಬರುವುದು ಕಾಣಿಸಿತು.

ಕೂಡಲೇ ಸಮರಸೇನನೊಂದಿಗಿದ್ದ ಭಟರು ಆತನ ಕೈಹಿಡಿದೆಳೆಯುತ್ತಾ ಪಕ್ಕದಲ್ಲಿದ್ದ ಗೋಡೆಯ ನೆರಳಿಗೆ ಸರಿದು "ನಾವು ನಿಮ್ಮ ಸ್ನೇಹಿತರು. ವ್ಯಾಘ್ರದತ್ತನ ಸೈನಿಕರು ಪಹರೆ ಕಾಯುತ್ತಿರುವರು. ನಾವು ಕತ್ತಲೆಯಲ್ಲಿ ನಿಂತು ಅವರು ಸನಿಯಕ್ಕೆ ಬಂದ ಕೂಡಲೇ ಹಠಾತ್ತನೆ ಮೇಲೆಬಿದ್ದು ಅವರನ್ನು ಕೊನೆಗಾಣಿಸಬೇಕು. ಸಿದ್ಧರಾಗಿರಿ" ಎಂದರು.

ಸ್ವಲ್ಪ ಸಮಯಕ್ಕೆಲ್ಲಾ ವ್ಯಾಘ್ರದತ್ತನ ಭಟರು ಅವರ ಸಮಿಾಪಕ್ಕೆ ಬಂದರು.

ಕತ್ತಲೆಯಲ್ಲಿ ಹೊಂಚಿಕೊಂಡಿದ್ದ ಸಮರಸೇನನೂ, ಆತನ ನೂತನ ಮಿತ್ರರೂ ಅವರ ಮೇಲೆ ಒಮ್ಮೆಗೇಬಿದ್ದು, ಅವರು ಕೂಗಾಡಲೂ ಸಹ ಎಡೆಕೊಡದೆ, ಕತ್ತುಹಿಚುಕಿಕೊಂದು ಅಲ್ಲಿಯೇ ಇದ್ದ ಪಾಳುಬಾವಿ ಯಲ್ಲಿ ಆ ಶವಗಳನ್ನು ಬಿಸಾಡಿದರು.

[ಇನ್ನೂ ಇದೆ]





# ಕುರೂಪಿ

ಮಿಥಿಲಾನಗರದ ರಾಜನಿಗೆ ಒಬ್ಬನೇ ಒಬ್ಬ ಮಗ. ಆತನ ಹೆಸರು ಕುಶ. ಆತನು ಸಕಲ ಶಾಸ್ತ್ರಪಾರಂಗತನು. ಸರ್ವಸದ್ಗುಣಶೀಲನು. ಸುತ್ತಮುತ್ತಲಿನ ಪ್ರದೇಶಗಳಲ್ಲೆಲ್ಲಾ ಆತನಿಗೆ ಅಪಾರವಾದ ಕೀರ್ತಿ ಲಭಿಸಿತ್ತು. ಅನೇಕ ರಾಜಕುಮಾರರು ಆತನ ಪ್ರಾಣಮಿತ್ರರಾಗಿದ್ದರು. ಇಷ್ಟಿದ್ದೂ ಸಹ ಕುಶನಿಗೆ ಅಂಗಸೌಂದರ್ಯವಿರಲಿಲ್ಲ. ಆತನು ಕುರೂಪಿ ಎಂಬ ಚಿಂತೆ ಯಾರಿಗೂ ಇಲ್ಲದಿದ್ದರೂ ಆತನಿಂದಮಾತ್ರ ಅದನ್ನು ಮರೆಯಲು ಸಾಧ್ಯವಾಗಲಿಲ್ಲ.

ಈ ಕಾರಣದಿಂದ ಆತನು ಯುಕ್ತ ವಯಸ್ಸಾದರೂ ವಿವಾಹ ಮಾಡಿಕೊಳ್ಳಲು ಒಡಂಬಡಲಿಲ್ಲ. ಮದುವೆಯಾಗಿ ವಂಶವನ್ನು ಉಳಿಸುವಂತೆ ವೃದ್ಧರಾಜನು ಪರಿಪರಿವಿಧದಲ್ಲಿ ಕುಶನಿಗೆ ಹೇಳಿನೋಡಿದನು. ಆದರೆ ಪ್ರತಿ ಸಾರಿಯೂ ಕುಶನು "ಅಪ್ಪಾ, ನನ್ನಂತಹ ಕುರೂಪಿಯನ್ನು ಯಾವ ರಾಜಕುಮಾರಿ ಮದುವೆಯಾಗುವಳು" ಎಂದು ಹತಾಶನಾಗಿ ನುಡಿಯುತ್ತಿದ್ದನು. "ನಿನ್ನ ಪರಿಚಯವಾದ ಮೇಲೆ ಯಾವಳು ನಿನ್ನನ್ನು ಪ್ರೇಮಿಸಲಾರಳು?" ಎಂದು ಮರುಸವಾಲು ಹಾಕಿದ ರಾಜ.

ತಂದೆಯ ಒತ್ತಾಯದಿಂದ ಹೊರಬೀಳಲು ಕುಶನು ಒಂದು ಯುಕ್ತಿ ಹೂಡಿದ. ಆತನು ಸ್ವತಃ ಚಿನ್ನದಿಂದ ಒಂದು ಅಪೂರ್ವಸುಂದರಿಯ ಪ್ರತಿಮೆಯನ್ನು ಸಿದ್ಧಮಾಡಿ, ಅಂತಹ ಕನ್ಯೆ ಸಿಕ್ಕಿದರೆಮಾತ್ರ ತಾನು ವಿವಾಹವಾಗುವೆನೆಂದು ಹೇಳಿದ. ಅಂತಹ ಚೆಲುವೆ ಎಲ್ಲಿಯೂ ಇಲ್ಲವೆಂದು ಕುಶನ ಅಭಿಪ್ರಾಯ.

ಆದರೆ ಆ ಪುತ್ಥಳಿಯನ್ನೇ ಸಕಲವಿಧಗಳಲ್ಲಿ ಹೋಲುತ್ತಿದ್ದಳು ಮಗಧರಾಜನ ಹಿರಿಯ ಪುತ್ರಿ ಪ್ರಭಾವತಿ. ಕುಶನು ಸಿದ್ಧಪಡಿಸಿದ ಪ್ರತಿಮೆಯಂತಹ ಕನ್ಯೆಗಾಗಿ ಹುಡುಕುತ್ತಾ ಬಂದ ಮಿಥಿಲಾನಗರದ ದೂತರು ಈ ವಿಷಯವನ್ನು ಕಂಡುಹಿಡಿದರು.

ಮಗಧರಾಜನಿಗೆ ಒಬ್ಬರಲ್ಲ, ಇಬ್ಬರಲ್ಲ ಎಂಟುಜನ ಕುವರಿಯರಿದ್ದರು. ಮಿಥಿಲಾನಗರದ ಯುವರಾಜನ ಕೀರ್ತಿ ಪ್ರತಿಭೆಗಳನ್ನು ಮೊದಲೇ ಅರಿತಿದ್ದ ಮಗಧರಾಜನು

ಎಂ. ಎಚ್. ಕಲ್ಯಾಣಮ್ಮ



ಸಂತೋಷದಿಂದ ಈ ವಿವಾಹಕ್ಕೆ ಒಪ್ಪಿಗೆ ಇತ್ತನು. ತನ್ನನ್ನು ನೋಡದೆಯೇ ತನ್ನನ್ನು ಹೋಲುವ ಪ್ರತಿಮೆಯನ್ನು ತಯಾರಿಸಿದ ಕುಶನನ್ನು ವಿವಾಹವಾಗಲು ಪ್ರಭಾವತಿಯೂ ಹಾತೊರೆಯುತ್ತಿದ್ದಳು.

ಕುಶನುಮಾತ್ರ ಎದೆಗುಂದಿದನು. ಅಂತಹ ಅಪೂರ್ವ ಚೆಲುವೆಯನ್ನು ತಂದು ತನಗೆ ಮದುವೆ ಮಾಡಬೇಡಿರೆಂದು ತನ್ನ ತಂದೆಯನ್ನು ಕೇಳಿಕೊಂಡನು. ಆದರೆ ವೃದ್ಧ ರಾಜನು ಆ ಮಾತನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. "ಒಂದು ವರ್ಷ ನಿನ್ನ ಪತ್ನಿಯಾಗಿದ್ದನಂತರ ಪ್ರಭಾವತಿ ನಿನಗಿಂತಲೂ ಸುಂದರಾಕಾರನು ಈ ಪ್ರಪಂಚದಲ್ಲೇ ಇಲ್ಲವೆಂದು ತಿಳಿಯುವಳು! ನಂಬು" ಎಂದ ರಾಜ.

"ಈ ಒಂದು ವರ್ಷ?" ಎಂದು ಉದ್ಗಾರ ತೆಗೆದ ಕುಶ. ವೃದ್ಧ ರಾಜನು ಒಂದು ಉಪಾಯ ಸೂಚಿಸಿದ. "ಮಗೂ, ಹಿಂದೆ ನಮ್ಮ ವಂಶದಲ್ಲಿ ಒಂದು ಪುರಾತನ ಸಾಂಪ್ರದಾಯವಿತ್ತು. ಅದರಪ್ರಕಾರ ವಧು ವಿವಾಹ ಸಮಯದಲ್ಲಿ ವರನನ್ನು ನೋಡಬೇಕಾದ ಆಗತ್ಯವಿಲ್ಲ. ಈಗ ಆಪ್ರಕಾರವೇ ನಿನ್ನ ವಿವಾಹವನ್ನು ನೆರವೇರಿಸುವೆನು" ಎಂದ ರಾಜ.

"ವಿವಾಹಾ ನಂತರ?" ಸಂಶಯ ಸೂಚಿಸಿದ ಕುಶ. "ಒಂದು ವರ್ಷದವರೆವಿಗೂ ನಿನ್ನ ಶಯನಾಗಾರದಲ್ಲಿ ದೀಪವಿರಕೂಡದೆಂದು ನಿಷೇಧಿಸುವೆನು" ಎಂದು ರಾಜ.

ಬಲವಂತದಿಂದ ಕುಶನು ವಿವಾಹಕ್ಕೆ ಅಂಗೀಕರಿಸಬೇಕಾಯಿತು. ಆತನಿಗೂ ಪ್ರಭಾವತಿಗೂ ಪುರಾತನ ಸಾಂಪ್ರದಾಯದಂತೆ ವಿವಾಹ ನಡೆಯಿತು. ಪ್ರತಿರಾತ್ರಿ ಕುಶನು ಕತ್ತಲೆಯಲ್ಲಿ ತನ್ನ ಹೆಂಡತಿಯ ಹತ್ತಿರ ಬರುವನು. ಆಕೆಗೆ ಚಿತ್ರವಿಚಿತ್ರವಾದ ಕಥೆಗಳನ್ನು ಹೇಳುವನು. ಸುಮಧುರವಾಗಿ ಹಾಡುವನು.

ತನ್ನ ಗಂಡನ ಸುಗುಣಶೀಲಗಳಿಗೆ, ತಿಳುವಳಿಕೆಗೆ ಪ್ರಭಾವತಿ ಹೆಮ್ಮೆಪಟ್ಟಳು. ಆದರೆ ಹನ್ನೆರಡು ತಿಂಗಳವರೆವಿಗೆ ಅತನ ಮುಖಕಮಲವನ್ನು ನೋಡಿ ಆನಂದಿಸುವ ಭಾಗ್ಯ ತನಗಿಲ್ಲವಲ್ಲಾ ಎಂದು ವ್ಯಾಕುಲಗೊಂಡಳು. ದಿನದಿನಕ್ಕೆ ಈ ಚಿಂತೆ ಪ್ರಬಲಿಸುತಿತ್ತು. ತನ್ನ ಪತಿಯ ವದನಾರವಿಂದವನ್ನು ಕಾಣದೆ ಇನ್ನೊಂದು ಕ್ಷಣವಾದರೂ ಜೀವಿಸಲಾರೆ

ನೆಂದು ಆಕೆಗೆ ತೋರಿತು. ಪ್ರಭಾವತಿ ತನ್ನ ದಾಸಿಯನ್ನು ಕರೆದು ಹೇಗಾದರೂ ಮಾಡಿ ತನ್ನ ಗಂಡನನ್ನು ತೋರಿಸಿದರೆ ಕೋರಿದ ಬಹುಮಾನ ಕೊಡುವೆನೆಂದಳು. ದಾಸಿ ಒಂದು ದಿನ ಬೀದಿಯಲ್ಲಿ ಮೆರವಣಿಗೆಯಾಗಿ ಹೋಗುತ್ತಿದ್ದ ಕುಶನನ್ನು ಕಿಟಕಿಯ ಮರೆಯಿಂದ ಪ್ರಭಾವತಿಗೆ ತೋರಿಸಿದಳು.

ಕುಶನನ್ನು ನೋಡಿದ ಕೂಡಲೇ ಪ್ರಭಾವತಿಯ ತಲೆ ಗಿರ್ರನೆ ತಿರುಗಿದಂತಾಯಿತು. ತನ್ನ ಗಂಡ ಅಷ್ಟು ಕುರೂಪಿಯೇ? ಸುಳ್ಳು. ಆದರೆ ಆ ರಾಜ ಮರ್ಯಾದೆಗಳಿಂದ ಮೆರವಣಿಗೆಯಲ್ಲಿ ಹೋಗುವ ಅಧಿಕಾರ ತನ್ನ ಗಂಡನಿಗಲ್ಲದೆ ಮತ್ತೆ ಯಾರಿಗಿದೆ? ಆತನು ಕುರೂಪಿಯಾದುದರಿಂದಲೇ ಮದುವೆಯ ಸಮಯದಲ್ಲಿ ತಾನಾತನ ಮುಖವನ್ನು ನೋಡದಂತೆ ಮಾಡಿದರು. ಅದರಿಂದಲೇ ತಮ್ಮ ಶಯನ ಮಂದಿರದಲ್ಲಿ ದೀಪಗಳಿರಕೂಡದೆಂದು ನಿಷೇಧಿಸಿದರು. ಎಂತಹ ಮೋಸ!

ಪ್ರಭಾವತಿಗೆ ತುಂಬಾ ಕೋಪ ಬಂತು. ಆಕೆ ತನ್ನ ವಸ್ತ್ರಾಭರಣಗಳನ್ನು ಅಣಿಮಾಡಿಕೊಂಡು ತೌರುಮನೆಗೆ ಹೋಗಲು ಸಿದ್ಧಳಾದಳು. ಈ ಸಮಾಚಾರ ಕುಶನಿಗೆ ತಿಳಿಯಿತು. ಆತನು ವ್ಯಾಕುಲಚಿತ್ತನಾಗಿ "ಆಕೆಗೆ ಇಷ್ಟ ಬಂದಂತೆ ಮಾಡಲಿ ಬಿಡಿ" ಎಂದ.

ಹಾಗೆ ಹೇಳಿದನಾದರೂ ಪ್ರಭಾವತಿ ಹೊರಟುಹೋದಂದಿನಿಂದ ಕುಶನಿಗೆ ಜೀವನವು ಶೂನ್ಯವಾಗಿ ತೋರಿತು. ನಿದ್ರಾಹಾರಗಳು ದೂರವಾದವು. ಕೊನೆಗೊಂದು ದಿನ







ಈಗ ಕೋಪದಿಂದ ಕೆಂಡವಾಗುತ್ತಿದ್ದಳು. ತನಗೆ ದ್ರೋಹಮಾಡಿದ್ದು ಸಾಲದೆ ತನ್ನನ್ನು ಹಿಂಬಾಲಿಸಿದುದನ್ನು ಕಂಡು ಆಕೆ ಅತ್ಯಂತ ಆಗ್ರಹಗೊಂಡಳು.

ಕುಶನು ಮತ್ತೊಂದು ರೀತಿ ಸಂದೇಶ ಕಳುಹಿಸಲು ಆಲೋಚಿಸಿದನು. ಆತನು ಒಬ್ಬ ಕುಂಬಾರನ ಹತ್ತಿರಕ್ಕೆ ಹೋಗಿ "ತಾತಾ, ನೀನು ಸಿದ್ಧಪಡಿಸುವ ಮಡಿಕೆಗಳಿಗೆ ಚೆನ್ನಾಗಿ ಬಣ್ಣಹಾಕಿ, ಚಿತ್ರಗಳನ್ನು ಬರೆಯುವೆನು. ಅವುಗಳನ್ನು ಆಸ್ಥಾನಕ್ಕೆ ತೆಗೆದುಕೊಂಡು ಹೋಗಿ ಕೊಡುವೆಯಾ?" ಎಂದು ಕೇಳಿದ. "ಅದು ನಿನ್ನ ಕುಶಲಕೆಲಸವನ್ನು ಅವಲಂಬಿಸಿದೆ ಮಗೂ" ಎಂದ ಆ ಕುಂಬಾರ.

ಕುಶನ ಕೆಲಸಗಾರಿಕೆ ಅಂತಿಂತಹದಲ್ಲ. ಆತನು ಬಣ್ಣ ಬಳಿದು. ಚಿತ್ರಗಳನ್ನು ಬರೆದ ಮಡಿಕೆಗಳನ್ನು ನೋಡಿ ರಾಜನು ಬಹಳವಾಗಿ ಪ್ರಶಂಸೆಮಾಡಿ, ಅವುಗಳನ್ನು ತನ್ನ ಕುವರಿಯರಿಗೆ ಬಹುಮಾನವಾಗಿ ಕಳುಹಿಸಿಕೊಟ್ಟನು. ಉಳಿದ ರಾಜಕುವರಿಯರೆಲ್ಲ ಅವುಗಳನ್ನು ನೋಡಿ ಆನಂದಿಸಿದರೂ ಪ್ರಭಾವತಿ ಮಾತ್ರ ಮಡಿಕೆಯಮೇಲೆ ತನ್ನ ಚಿತ್ರವಿರುವುದನ್ನು ಕಂಡು ಅದು ತನ್ನ ಪತಿಯ ಕೆಲಸವೆಂದು ಅರಿತು ಮತ್ತಷ್ಟು ಕುಪಿತಳಾಗಿ, ಮಡಿಕೆಯನ್ನು ಚೂರುಚೂರುಮಾಡಿದಳು.

ಈಸಾರಿ ಕುಶನು ತನ್ನ ಪತ್ನಿಯ ಸಾಮಿಪ್ಯ ಸೇರಲು ಪ್ರಯತ್ನಿಸಿದ. ಅರಮನೆಯ ಅಡಿಗೆಯವನನ್ನು ಕಂಡು "ಸ್ವಾಮಿ,

ಆತನು ರಾಜಪೋಷಾಕುಗಳನ್ನು ವಿಸರ್ಜಿಸಿ, ಸಾಧಾರಣ ವಸ್ತ್ರಗಳನ್ನು ತೊಟ್ಟು, ಮಗಧ ರಾಜ್ಯಕ್ಕೆ ಪ್ರಯಾಣ ಬೆಳೆಸಿದನು. ಪ್ರಭಾವತಿಯ ಮನಸ್ಸಿಗಾದ ಗಾಯವನ್ನು ಗುಣಪಡಿಸಿ, ಆಕೆಗೆ ತನ್ನಮೇಲೆ ಕನಿಕರವುಂಟಾಗುವಂತೆ ಮಾಡಬೇಕೆಂದು ಆತನ ಉದ್ದೇಶವಾಗಿತ್ತು.

ಮಗಧರಾಜ್ಯವನ್ನು ಸೇರಿಕೊಂಡ ಕುಶನು ರಾತ್ರಿಹೊತ್ತು ಅಂತಃಪುರದ ಹತ್ತಿರಕ್ಕೆ ಹೋಗಿ ಮುರಳಿಯಿಂದ ಕರುಣಾರಸಪೂರಿತವಾದ ಹಾಡುಗಳನ್ನು ಊದುವನು. ಪ್ರಭಾವತಿ ಆ ದಿವ್ಯಗಾನವನ್ನು ಕೇಳಿ ಅದು ತನ್ನ ಗಂಡನದೆಂದು ಗುರುತಿಸಿದಳು. ಹಿಂದೆ ಅದೇ ಗಾನವನ್ನು ಕೇಳಿ ಪರವಶಳಾಗುತ್ತಿದ್ದ ಪ್ರಭಾವತಿ





ನಾನು ಹೊಸ ಹೊಸ ಬಗೆಯ ಭಕ್ಷ್ಯಗಳನ್ನು ಮಾಡಿ, ಮಹಾರಾಜರನ್ನು ಮೆಚ್ಚಿಸಬಲ್ಲೆನು. ನನ್ನ ಅಡಿಗೆಯ ರುಚಿ ನೋಡಿ ಮಹಾರಾಜರು ನಿಮಗೆ ಬಹುಮಾನ ಕೊಡುವರು. ನನಗೆ ನೀವೇನೂ ಸಂಬಳಸಾರಿಗೆ ಕೊಡಲವಶ್ಯಕವಿಲ್ಲ. ನಿಮ್ಮ ಕೈಕೆಳಗೆ ಕೆಲಸಮಾಡುವ ಅವಕಾಶ ಕೊಡಿ" ಎಂದು ಪ್ರಾರ್ಥಿಸಿದ. ಅಡಿಗೆಯವನು ಒಪ್ಪಿಕೊಂಡ.

ಮಾರನೆಯ ದಿನ ಊಟಮಾಡುವಾಗ ರಾಜನು ಅನೇಕ ವಿಧವಾದ ಹೊಸಬಗೆಯ ಭಕ್ಷ್ಯಗಳನ್ನು ನೋಡಿ ಆನಂದಪರವಶನಾದ. ಅವುಗಳನ್ನು ಅಂತಃಪುರದಲ್ಲಿದ್ದ ತನ್ನ ಕುವರಿಯರಿಗೆ ಕೂಡಲೇ ಕಳುಹಿಸಿಕೊಡುವಂತೆ ಅಪ್ಪಣೆ ಮಾಡಿದನು. ಕುಶನು ಬಂಗಾರದ ಹರಿವಾಣದಲ್ಲಿ ಅವುಗಳನ್ನಿಟ್ಟುಕೊಂಡು ಪ್ರಭಾವತಿಯ ಬಳಿಗೆ ಹೋದ. ಪ್ರಭಾವತಿ ತನ್ನ ಗಂಡನನ್ನು ಗುರುತಿಸಿಬಿಟ್ಟಳು. ತನಗಾಗಿ ಆತನಿಷ್ಟು ಪಾಡುಪಡುತ್ತಿರುವನೆಂಬ ಕನಿಕರ ಸಹ ಆಕೆಗುಂಟಾಗಲಿಲ್ಲ. "ನಿನ್ನ ಕೈ ಊಟ ನನಗೆ ಬೇಕಾಗಿಲ್ಲ. ಮತ್ತೆ ಯಾರನ್ನಾದರೂ ಕಳುಹಿಸು" ಎಂದಳು ನಿರ್ದಯಳಾಗಿ.

ತನ್ನ ಪತ್ನಿಯು ಕಠಿನಾತ್ಮಳಾದಳೆಂದೂ, ಅದನ್ನು ಬದಲಾಯಿಸಲು ತನ್ನ ಕೈಯಿಂದ ಸಾಧ್ಯವಿಲ್ಲವೆಂದೂ ಕುಶನು ಭಾವಿಸಿದನು. ಆತನು ಮಗಧರಾಜ್ಯವನ್ನು ತೊರೆದು, ಸನ್ಯಾಸಾಶ್ರಮ ಪಡೆಯಲು ಕಾಶಿಗೆ ಹೋಗಲು ತೀರ್ಮಾನಿಸಿದನು. ಆದರೆ ಈ ತೀರ್ಮಾನಕ್ಕೆ



ಬರುವ ಸಮಯಕ್ಕೆ, ಒಂದು ದುರ್ವಾರ್ತೆ ರಾಜಭವನದಲ್ಲಿ ಹರಡಿತು. ಯಾರೋ ಏಳು ಜನ ರಾಜರು ಮಗಧದೇಶದಮೇಲೆ ದಂಡೆತ್ತಿ ಬರುತ್ತಿರುವರಂತೆ! ಪ್ರಭಾವತಿಯ ಸೌಂದರ್ಯವನ್ನು ಕುರಿತು, ಆಕೆಯನ್ನು ಪತಿಯು ತೊರೆದುಬಿಟ್ಟನೆಂದು ತಿಳಿದು, ಆಕೆಯನ್ನು ವಿವಾಹವಾಗಲು ಅವರು ಈಗ ಯುದ್ಧಕ್ಕೆ ಬರುತ್ತಿರುವರಂತೆ!!

ಈ ಸುದ್ದಿ ಕೇಳಿ ಮಗಧಾಧಿಪತಿ ತತ್ತರಿಸಿದನು. ತನ್ನೊಬ್ಬನ ಸೇನೆಯಿಂದ ಏಳು ಸೇನೆಗಳನ್ನು ಹೇಗೆ ಎದುರುಗೊಳ್ಳುವುದು? ಒಂದು ವೇಳೆ ಪ್ರಭಾವತಿಗೆ ಮರುಮದುವೆ ಮಾಡಲು ಸಿದ್ಧನಾದರೂ ಏಳುಜನ ರಾಜರಿದ್ದಾರೆ. ಒಬ್ಬರಿಗೆ ಆಕೆಯನ್ನು ಕೊಟ್ಟು ವಿವಾಹ ಮಾಡಿ




ದರೆ ಉಳಿದ ಆರುಜನ ಶತ್ರುಗಳಾಗುವರು. ಆದುದರಿಂದ ಮಂತ್ರಿಗಳನ್ನೂ, ಪಂಡಿತರನ್ನೂ ಬರಮಾಡಿಕೊಂಡು ಈ ಸಂಕಟದಿಂದ ಪಾರಾಗುವ ಬಗೆ ಹೇಗೆಂದು ಕೇಳಿದನು.

ವಾಸ್ತವವಾಗಿ ನುಡಿಯಬೇಕಾದರೆ ಪ್ರಭಾವತಿ ಮಾಡಿದ ಕಾರ್ಯ ಅರಮನೆಯಲ್ಲಿ ಯಾರಿಗೂ ಸರಿದೋರಲಿಲ್ಲ. ಅದರಿಂದ ಅವರೆಲ್ಲಾ ತಮ್ಮತಮ್ಮಲ್ಲಿ ಚರ್ಚೆ ಮಾಡಿಕೊಂಡು ಈ ಸಲಹೆಯನ್ನು ರಾಜನ ಮುಂದಿಟ್ಟರು.

"ಮಹಾ ಪ್ರಭೂ, ಈ ವಿಪತ್ತಿನಿಂದ ಪಾರಾಗಬೇಕಾದರೆ ಒಂದೇ ಒಂದು ಉಪಾಯ ತೋರುತ್ತಿದೆ. ಹಿರಿಯ ರಾಜಕುಮಾರಿಯನ್ನು ಏಳು ಭಾಗವಾಗಿ ಸೀಳಿ, ನಮ್ಮ ಮೇಲೆ ದಂಡೆತ್ತಿ ಬರುವ ಪ್ರತಿಯೊಬ್ಬ ರಾಜನಿಗೂ ಒಂದೊಂದು ಭಾಗವನ್ನು ಕಾಣಿಕೆಯಾಗಿ ಕಳುಹಿಸಿಕೊಡಿ. ಎಲ್ಲರೂ ಬಂದ ದಾರಿಯಲ್ಲಿ ಹಿಂತಿರುಗುವರು. ದೇಶಕ್ಕೆ ಬಂದ ಯುದ್ಧಭಯ ತೊಲಗುವುದು"

ಮಂತ್ರಿ ಮತ್ತು ಪಂಡಿತರು ಕೊಟ್ಟ ಸಲಹೆ ಕೇಳಿದ ಕೂಡಲೇ ಕುಶನ ರಕ್ತ ಕುದಿಯಿತು. ಏನು? ಯುದ್ಧಭಯದಿಂದ ನನ್ನ ಹೆಂಡತಿಯನ್ನು ಬಲಿಗೊಡುವರೇ? ಕುಶನು ಅಡಿಗೆಯವನ ಉಡುಪನ್ನು ಧರಿಸಿಕೊಂಡೇ ರಾಜನ ಬಳಿಗೆ ಹೋಗಿ "ಮಹಾರಾಜರೇ, ಅಂಜುಬುರುಕರ ಸಲಹೆಗೆ ಕಿವಿಗೊಡಬೇಡಿ. ನಿಮ್ಮ ಸೇನೆಯನ್ನು ನನಗೆ ಒಪ್ಪಿಸಿ. ನಾನು ಹೋಗಿ ಶತ್ರುಗಳನ್ನು ಸಂಹರಿಸಿ ಬರುವೆನು" ಎಂದ.

ಮಗಧರಾಜನಿಗೆ ವಿಸ್ಮಯವುಂಟಾಯಿತು. "ನಮ್ಮ ಸೇನೆಗೆ ಅಡಿಗೆಯವನು ಸೇನಾಧಿಪತಿಯಾಗುವುದೇ?" ಎಂದು ಕೇಳಿದ.

"ಮಹಾರಾಜರೇ, ನಾನು ಅಡಿಗೆಯವನಲ್ಲ. ನಿಮ್ಮ ಅಳಿಯ. ಪ್ರಭಾವತಿಯ ಕೋಪವನ್ನು ಶಮನಗೊಳಿಸಲು ಇಷ್ಟು ಕಷ್ಟಪಟ್ಟಿದ್ದೇನೆ. ಆಕೆಯ ಪ್ರಾಣ ಕಾಪಾಡುವ ಸಲುವಾಗಿ ಯುದ್ಧರಂಗದಲ್ಲಿ ಸಾಯಲಾರೆನೇ? ಕೂಡಲೇ ಸೇನೆಯನ್ನು ಸಿದ್ಧಗೊಳಿಸಿ" ಎಂದ.

ರಾಜನು ತನ್ನ ಅಳಿಯನ ಔದಾರ್ಯಕ್ಕೆ ಬಹಳವಾಗಿ ಸಂತೋಷಗೊಂಡು ಕೂಡಲೇ ಸೇನೆಯನ್ನು ಕೂಡಿಸಿ ಕುಶನೊಂದಿಗೆ ಯುದ್ಧರಂಗಕ್ಕೆ ಕಳುಹಿಸಿಕೊಟ್ಟ. ಈ ಹೊಸ ಬಗೆಯ ವಾರ್ತೆಯನ್ನು ಕೇಳಿದ ತಕ್ಷಣ ಪ್ರಭಾವತಿಯ

ಕಲ್ಲಿನಂತಹ ಹೃದಯ ಕರಗಿ ನೀರಾಯಿತು. ಇಂತಹ ಉದಾರವಾದ ಪತಿಯೊಂದಿಗೆ ತಾನು ಎಷ್ಟು ನೀಚಳಾಗಿ ಪ್ರವರ್ತಿಸಿದೆ? ತನ ಗೋಸ್ಕರ ಗಂಡನು ಯುದ್ಧರಂಗದಲ್ಲಿ ಪ್ರಾಣ ಕಳೆದುಕೊಂಡರೆ, ತಾನುಮಾಡಿದ ದ್ರೋಹಕ್ಕೆ ಪಶ್ಚಾತ್ತಾಪವನ್ನು ಯಾರೊಂದಿಗೆ ಹೇಳಿ ಕೊಳ್ಳಬೇಕು? ಪ್ರಭಾವತಿ ಒಂದೇಸವನೆ ಕಣ್ಣೀರು ಸುರಿಸುತ್ತಿದ್ದಳು.

ಆದರೆ ಕುಶನಿಗೆ ಯುದ್ಧರಂಗದಲ್ಲಿ ಯಾವ ಪ್ರಮಾದವೂ ಉಂಟಾಗಲಿಲ್ಲ. ಕಾರಣವೇನೆಂದರೆ ಮಗಧರಾಜನಮೇಲೆ ದಂಡೆತ್ತಿಬಂದ ಏಳುಜನ ರಾಜಕುಮಾರರು ಕುಶನ ಆಪ್ತ ಗೆಳೆಯರಾಗಿದ್ದರು. ಆತನು ಮಿಥಿಲಾ ಪಟ್ಟಣವನ್ನುಬಿಟ್ಟು ಹೋದಮೇಲೆ ಆತನ ಸುಳಿವು ತಿಳಿಯದೆ ಅವರೆಲ್ಲರೂ ವ್ಯಾಕುಲಗೊಂಡಿದ್ದರು. ಆತನಿಗೆ ಅಂತಹ ದುರ್ಗತಿಯನ್ನುಂಟು ಮಾಡಿದ ಪ್ರಭಾವತಿಯನ್ನು ಪರಾಭವಗೊಳಿಸುವ ಉದ್ದೇಶದಿಂದ ಅವರು ತಮ್ಮ ಸೈನ್ಯಗಳನ್ನು ಸಾಗಿಸಿಕೊಂಡು ಹೊರಟು ಬಂದಿದ್ದರು. ಯುದ್ಧಭೂಮಿಯಲ್ಲಿ ತಮಗೆ ಕುಶನು ಎದುರಾಗಲು ಅವರ ಆನಂದಕ್ಕೆ ಪಾರವೇ ಇಲ್ಲ. ಗೆಳೆಯರಾಗಿ ಆಲಿಂಗಿಸಿಕೊಂಡರು.

ಅವರೆಲ್ಲರನ್ನೂ ಸಂಗಡ ಕರೆದುಕೊಂಡು ಕುಶನು ಅರಮನೆಗೆ ಬಂದಾಗ ಪ್ರಭಾವತಿಯ ಸಂತೋಷಕ್ಕೆ ಎಲ್ಲೆ ಇಲ್ಲ. ಕುಶನು ಆ ಏಳು ಜನ ರಾಜಕುಮಾರರಿಗೂ ಮಗಧರಾಜನ ಉಳಿದ ಕುವರಿಯರೊಂದಿಗೆ ವಿವಾಹದ ಏರ್ಪಾಟು ಮಾಡಿದನು. ಅವರೆಲ್ಲ ಈ ಏರ್ಪಾಟಿಗೆ ಸಂತಸಗೊಂಡರು. ಆದರೆ ಅವರಲ್ಲಿ ಒಬ್ಬಳಾದರೂ ತನ್ನ ಗಂಡನನ್ನು ನೋಡಿ, ಪ್ರಭಾವತಿ ಕುಶನನ್ನು ಕಂಡು ಹೆಮ್ಮೆ ಪಟ್ಟಷ್ಟು ಗರ್ವಪಡಲಿಲ್ಲವೆಂದರೆ ಅತಿಶಯೋಕ್ತಿಯಲ್ಲ. ಆಕೆ ತನ್ನ ಗಂಡನ ಚರಣಕಮಲಗಳಮೇಲೆ ಬಿದ್ದು ತನ್ನ ತಪ್ಪನ್ನು ಕ್ಷಮಿಸುವಂತೆ ಬೇಡಿಕೊಂಡಳು. ಕುಶನು ಆಕೆಯ ಕಂಗಳಿಗೆ ಈಗೇಕೆ ಕುರೂಪಿಯಾಗಿ ಕಾಣಿಸುತ್ತಿಲ್ಲವೋ ಆಕೆಗೆ ಅರ್ಥವಾಗಲಿಲ್ಲ. ಆತನ ಮುಖವನ್ನು ನೋಡುತ್ತಿದ್ದರೆ ಅಷ್ಟು ಸುಂದರಾಕಾರನು ಈ ಪ್ರಪಂಚದಲ್ಲೇ ಇನ್ನೊಬ್ಬನು ಇರಲಾರನೆಂದು ಪ್ರಭಾವತಿಗೆ ಈಗ ತೋರಿತು.






ಬ್ರಹ್ಮದತ್ತನು ಕಾಶಿರಾಜ್ಯವನ್ನು ಆಳುತ್ತಿದ್ದ ಕಾಲದಲ್ಲಿ ಒಂದು ಸಾರಿ ಬೋಧಿಸತ್ವನು ವಾನರವಾಗಿ ಜನ್ಮತಾಳಿದನು. ಆ ವಾನರನ ಹೆಸರು ನಂದಿ. ಅವನಿಗೆ ಒಬ್ಬ ಸಹೋದರ ನಿದ್ದ. ಅವರು ಹಿಮವತ್ಪರ್ವತದ ಎಂಟು ಸಾವಿರ ಕೋತಿಗಳ ಗುಂಪಿಗೆ ನಾಯಕರಾಗಿದ್ದರು. ನಂದಿಗೆ ಮನೆಯಲ್ಲಿ ಕುರುಡಿಯಾದ ಮುದಿ ತಾಯಿಯೊಬ್ಬಳಿದ್ದಳು.

ನಂದಿ ಮತ್ತು ಆತನ ತಮ್ಮ ದಿನಾ ವನಗಳಲ್ಲಿ ಸಿಕ್ಕುವ ಒಳ್ಳೆಯ ಫಲಗಳನ್ನು ತಂದು, ತಮ್ಮ ಹಿಂಡಿನಲ್ಲಿದ್ದ ನೌಕರರೊಂದಿಗೆ ಅವುಗಳನ್ನು ತಾಯಿಗೆ ಕೊಟ್ಟು ಕಳುಹಿಸುತ್ತಿದ್ದರು. ಆ ನೌಕರರು ಆ ಫಲಗಳನ್ನು ಆಕೆಗೆ ಮುಟ್ಟಿಸದೆ, ಅವರೇ ಅಪಹರಿಸಿಬಿಡುತ್ತಿದ್ದರು.

ಒಂದು ದಿನ ನಂದಿ ತನ್ನ ತಾಯಿಯ ಸ್ಥಿತಿಯನ್ನು ಕಂಡು ಚಕಿತನಾಗಿ "ಅಮ್ಮಾ, ದಿನಾ ನಾವು ಕಳುಹಿಸುವ ಹಣ್ಣುಹಂಪಲುಗಳನ್ನು ನೀನು ಭುಜಿಸುತ್ತಿಲ್ಲವೇ? ಏಕಿಷ್ಟು ಸೊರಗಿರುವಿ?" ಎಂದು ಕೇಳಿದ.

"ಇಲ್ಲ ಮಗೂ, ಹಣ್ಣೂ ಇಲ್ಲ, ಹಂಪಲೂ ಇಲ್ಲ. ತಿಂಡಿ ಇದ್ದಿದ್ದರೆ ನನಗೇಕೆ ಈ ಸ್ಥಿತಿಯೊದಗಬೇಕಾಗಿತ್ತು?" ಎಂದಳು.

ನಂದಿ ತೀವ್ರವಾಗಿ ಆಲೋಚಿಸಿ, ಹಿಮಾಲಯಾಪರ್ವತಕ್ಕೆ ಹೋಗಿ ನಡೆದುದನ್ನೆಲ್ಲಾ ತಮ್ಮನಿಗೆ ತಿಳಿಸಿ "ತಮ್ಮಾ, ಮನೆಯಬಳಿಯಿದ್ದು ನಾನು ತಾಯಿಯನ್ನು ಪೋಷಿಸುತ್ತೇನೆ. ನೀನು ನಾಯಕತ್ವವಹಿಸಿ ಈ ತಂಡವನ್ನು ಆಳಿಕೋ" ಎಂದ. ಅದಕ್ಕೆ ತಮ್ಮನು "ಅಣ್ಣಾ, ನಿನ್ನೊಂದಿಗೆ ನಾನೂ ಮನೆಯ ಹತ್ತಿರವಿದ್ದು ತಾಯಿಯ ಪೋಷಣೆಗೆ ನಿನಗೆ ಸಹಾಯ ಮಾಡುವೆನು" ಎಂದ.

ಈ ರೀತಿ ಅಣ್ಣತಮ್ಮಂದಿರು ಒಮ್ಮನಸ್ಸಿನಿಂದ ಮನೆಗೆ ಹೋದರು. ತಾಯಿಗೆ ಅರಳಿಮರದ ಮೇಲೊಂದು ಮನೆ ಮಾಡಿಕೊಟ್ಟು, ಆಕೆಯನ್ನು ಇಬ್ಬರೂ ತುಂಬಾ ಎಚ್ಚರಿಕೆಯಿಂದ ಕಾಪಾಡುತ್ತಿದ್ದರು.

ಹೀಗಿರಲು ಒಬ್ಬಾನೊಬ್ಬ ಬ್ರಾಹ್ಮಣನು ತಕ್ಷಶಿಲೆಯಲ್ಲಿ ಪ್ರಸಿದ್ಧನಾದ ಒಬ್ಬ ವಿದ್ವಾಂಸನ

ಯಚ್. ನಾರಾಯಣರಾವ್

ಬಳಿ ವಿದ್ಯೆ ಕಲಿಯುತ್ತಿದ್ದನು. ವಿದ್ಯಾಭ್ಯಾಸ ಮುಗಿದನಂತರ ಆತನು ಗುರುವಿನ ಪಾದಗಳಿಗೆರಗಿ, ಮನೆಗೆ ಹೋಗಲು ಅಪ್ಪಣೆಬೇಡಿದನು.

ಆತನು ಶಿಷ್ಯನನ್ನು ಕುರಿತು "ಕುಮಾರಾ, ನೀನು ಅನೇಕ ವಿದ್ಯೆಗಳನ್ನು ಕಲಿತುಕೊಂಡೆ. ಆದರೆ ನಿನ್ನ ಸ್ವಭಾವ ಕಠಿನವಾದುದು; ಆದುದರಿಂದ ಕ್ರೂರಮಯವಾದ ಕೆಲಸಗಳನ್ನು ಮಾಡಬೇಡ. ಇದೇ ನನ್ನ ಉಪದೇಶ" ಎಂದು ಆಶೀರ್ವಾದಮಾಡಿ ಕಳುಹಿಸಿದನು.

ಆ ಬ್ರಾಹ್ಮಣಕುಮಾರನು ಗುರುಗಳ ಅಪ್ಪಣೆ ಪಡೆದು ಕಾಶೀನಗರವನ್ನು ಸೇರಿಕೊಂಡ. ಮದುವೆ ಆಯಿತು; ಗೃಹಸ್ಥಾಶ್ರಮವನ್ನು ಸ್ವೀಕರಿಸಿದ. ಆತನಿಗೆ ಹೊಟ್ಟೆಹೊರೆದುಕೊಳ್ಳಲು ದಾರಿಯೇ ಕಾಣಿಸದಾಯಿತು. ಆದುದರಿಂದ ಬೇಡರ ವೃತ್ತಿಯನ್ನು ಅವಲಂಬಿಸಿದ. ಪ್ರಾಣಿಗಳನ್ನೂ, ಪಕ್ಷಿಗಳನ್ನೂ ಬೇಟೆಯಾಡಿ, ಅವುಗಳ ಮಾಂಸವನ್ನು ವಿಕ್ರಯಿಸಿ, ಜೀವನ ಸಾಗಿಸುತ್ತಿದ್ದ.

ಒಂದುದಿನ ಎಷ್ಟು ಪ್ರಯತ್ನಪಟ್ಟರೂ, ಒಂದು ಪ್ರಾಣಿಯಾದರೂ ಆ ಬ್ರಾಹ್ಮಣನ ಕಣ್ಣಿಗೆ ಬೀಳಲಿಲ್ಲ. ಇನ್ನು ಲಾಭವಿಲ್ಲವೆಂದುಕೊಂಡು ಮನೆಗೆ ಹಿಂತಿರುಗುತ್ತಿರುವಾಗ ಅರಳಿಮರದಕಡೆ ದೃಷ್ಟಿ ಹೋಯಿತು. ಅದೇ ಸಮಯಕ್ಕೆ ತಾಯಿಗೆ ಹಣ್ಣುಹಂಪಲುಗಳನ್ನು ಕೊಟ್ಟು ಉಪಚರಿಸುತ್ತಾ ಆಕೆಯಹಿಂದೆ ನಂದಿ ಮತ್ತು ಆತನ ತಮ್ಮ ಕುಳಿತಿದ್ದರು. ಅವರು ಬೇಡರವನನ್ನು ನೋಡಿದರು.



ಆ ಬೇಡ ಶಕ್ತಿಗುಂದಿದ ಆ ಮುದಿ ಕೋತಿಯನ್ನು ಕೊಲ್ಲಲೆಣಿಸಿ, ಬಾಣವನ್ನು ಗುರಿಯಿಟ್ಟನು. ಇದನ್ನು ನೋಡಿ ನಂದಿ ಸಹೋದರನೊಂದಿಗೆ "ಅದೋ, ಅವನು ನಮ್ಮ ತಾಯಿಯನ್ನು ಕೊಲ್ಲಲಿದ್ದಾನೆ. ಆಕೆಯ ಪ್ರಾಣಕ್ಕೆ ಬದಲಾಗಿ ನನ್ನ ಪ್ರಾಣವನ್ನು ಒಪ್ಪಿಸುವೆನು. ನಂತರ ಅಮ್ಮನನ್ನು ಕಾಪಾಡುವಭಾರ ನಿನ್ನದು" ಎಂದು ಹೇಳಿ ಗಬಗಬನೆ ಕೆಳಗಿಳಿದು ಬಂದನು.

"ಎಲೈ ಬೇಡನೇ, ನಮ್ಮ ಕುರುಡಳಾದ ತಾಯಿಯನ್ನು ಕೊಲ್ಲಬೇಡ. ಆಕೆಯ ಬದಲಾಗಿ ನನ್ನನ್ನು ಕೊಲ್ಲು" ಎಂದ. ಬೇಡನು ಆ ಮಾತಿಗೆ ಒಪ್ಪಿ, ನಿರ್ದಾಕ್ಷಿಣ್ಯವಾಗಿ ನಂದಿಯನ್ನು ಬಾಣದಿಂದ ಹೊಡೆದ.

ಆದರೆ ಆ ಬೇಡನು ತನ್ನ ಮಾತನ್ನು ಉಳಿಸಿಕೊಳ್ಳದೆ, ಮತ್ತೆ ತಾಯಿಕೋತಿಯನ್ನು ಸಾಯಿಸಲು ನಿರ್ಧರಿಸಿದನು. ಅದನ್ನು ಕಂಡು ಈಸಾರಿ ಕಿರಿಯಕೋತಿ ಕೆಳಗಿಳಿದು ಬಂದು ತನ್ನ ಹಿರಿಯ ಸಹೋದರನಂತೆಯೇ ಬೇಡನಿಗೆ ಬಲಿಯಾದನು. ಮಕ್ಕಳಿಬ್ಬರು ಸತ್ತ ಮೇಲೆ ಈ ಮುದಿಕೋತಿಯನ್ನು ಕೇಳುವವರಾರೂ ಇಲ್ಲ ಎಂಬ ಧಿಮಾಕಿನಿಂದ ಆತನು ನಿಷ್ಕರುಣೆಯಿಂದ ಆ ತಾಯಿಕೋತಿಯನ್ನೂ ಸಹ ಸಾಯಿಸಿಬಿಟ್ಟ.

ಈ ರೀತಿ ಅಂದು ಕೊಂದ ಮೂರು ವಾನರಗಳನ್ನು ಭುಜದಮೇಲಿದ್ದ ಕೋಲಿಗೆ ಸಿಕ್ಕಿಸಿ, ಉತ್ಸಾಹದಿಂದ ಮನೆಯ ಹಾದಿ ಹಿಡಿದ ಆ ಬೇಡ. ದಾರಿಯಲ್ಲಿ ಇದ್ದಕ್ಕಿದ್ದಂತೆ ಭಾರಿ ಗಾಳಿಮಳೆಗೆ ಆರಂಭವಾಯಿತು. ಆದರೂ ಚಿಂತಿಸದೆ ಬೇಗ ಮನೆ ಸೇರಲು ತಾಪತ್ರಯಪಡುತ್ತಿದ್ದ. ಹಳ್ಳಿಯಗಡಿಯನ್ನು ಸೇರುವವೇಳೆಗೆ, ಸಿಡಿಲು ಬಿದ್ದು ಅವನ ಮನೆ ಉರಿಯುತ್ತಿರುವುದೆಂದೂ, ಆತನ ಹೆಂಡತಿ ಮಕ್ಕಳು ಬೆಂಕಿಯಲ್ಲಿ ಸಿಕ್ಕಿಕೊಂಡಿರುವರೆಂತಲೂ ತಿಳಿಯಿತು. ಈ ವಿಷಯ ಕಿವಿಗೆ ಬಿದ್ದಕೂಡಲೇ ಆತನು ತಬ್ಬಿಬ್ಬಾದ. ಭುಜದ ಮೇಲಿದ್ದ ಕೋಲನ್ನು ಕೆಳಕ್ಕೆಸೆದು, ಮೈಮೇಲಿನ ಅರಿವೆಯನ್ನು ಕಿತ್ತೊಗೆದು, ಅಪಾರ ದುಃಖದಿಂದ ಎದೆ ಎದೆ ಬಡದುಕೊಳ್ಳುತ್ತಾ ಮನೆಯ ಕಡೆ ಧಾವಿಸಿ ನಡೆದ. ಧೈರ್ಯ ವಹಿಸಿ ನುನೆಯೊಳಕ್ಕೆ ನುಗ್ಗುವ ವೇಳೆಗೆ ಸರಿಯಾಗಿ, ಧಗಧಗ ಉರಿಯುತ್ತಿದ್ದ ಜಂತೆಯೊಂದು ಅವನ ತಲೆಯಮೇಲೆ ಬಿದ್ದು, ತಲೆಯೊಡೆಯಿತು. ಆಗ ಅವನು ನಿಂತಿದ್ದ ಪ್ರದೇಶ ಪಟಾರನೆ ಇಬ್ಭಾಗವಾಗಿ ಸೀಳಿಕೊಂಡಿತು. ಅವನು ಪಾತಾಳಕ್ಕೆ ಹೋಗುತ್ತಿರುವಾಗ ಒಂದು ವಿಷಯ ಜ್ಞಾಪಕಕ್ಕೆ ಬಂದಿತು.

'ನನ್ನ ಗುರುಗಳ ಮಾತನ್ನು ಮೀರಿ ಹಾಳಾದೆ. ಬೀಜವೊಂದು ಬಿತ್ತಿದರೆ ಬೆಳೆ ಬೇರೊಂದು ಬೆಳೆಯುವುದೇ? ನಾನು ಮಾಡಿದ ಪಾಪಕ್ಕೆ ತಕ್ಕಫಲವನ್ನು ಅನುಭವಿಸುತ್ತಿದ್ದೇನೆ" ಎಂದು ಕೊಂಡು ಆತನು ನರಕವಾಸಕ್ಕೆ ಹೋದ. ಅವನು ಮಾಯವಾದ ಕೂಡಲೇ ಭೂಮಿ ಮೊದಲಿನಂತೆ ಮುಚ್ಚಿಕೊಂಡಿತು.






# ದೋಷಿ ಯಾರು?

**ಒಂದು**ದಿವಸ ಮುಂಜಾನೆಯಲ್ಲಿ ಪರ್ಷಿಯಾ ದೇಶದ ಚಕ್ರವರ್ತಿ ತನ್ನ ಸಚಿವನೊಂದಿಗೆ ಟೈಗ್ರಿಸ್ ನದಿಯ ತೀರದಲ್ಲಿ ಸಂಚರಿಸುತ್ತಿರುವಾಗ, ನದಿಯಲ್ಲಿ ಮೀನು ಹಿಡಿಯುತ್ತಿದ್ದ ಮುದುಕನೊಬ್ಬನನ್ನು ನೋಡಿ, "ಅಯ್ಯಾ, ಈ ಇಳಿವಯಸ್ಸಿನಲ್ಲಿ ನಿನಗೇಕೆ ಈ ಅವಸ್ಥೆ? ದಿನಕ್ಕೆಷ್ಟು ಮೀನು ಹಿಡಿಯುವೆ? ಸಂಪಾದನೆ ಎಷ್ಟಾಗುತ್ತದೆ?" ಎಂದು ಕೇಳಿದ.

"ವಯಸ್ಸೇನೋ ಆಗಿದೆ ಮಹಾಪ್ರಭೂ, ಕಷ್ಟಪಡದಿದ್ದರೆ ಹೊಟ್ಟೆಗೆ ಹಿಟ್ಟಿಲ್ಲ. ಬೆಳಗಿನಿಂದ ಬಲೆಯೊಡ್ಡಿರುತ್ತೇನೆ. ಈತನಕ ಒಂದು ಮೀನಾದರೂ ಸಿಗಲಿಲ್ಲ" ಎಂದು ಹೇಳಿದ ಆ ಮುದುಕ. "ಈಸಾರಿ ಬಲೆಬೀಸು. ಅದರಲ್ಲಿ ಸಿಗುವುದಕ್ಕೆ ನಾವು ನೂರು ಮೊಹರಿಗಳನ್ನು ಕೊಟ್ಟು ಕೊಳ್ಳುತ್ತೇವೆ" ಎಂದ ಚಕ್ರವರ್ತಿ.

ಮುದುಕ ಸ್ಥಳ ಬದಲಾಯಿಸಿ, ಬಲೆಬೀಸಿ ಕೊಂಚ ಹೊತ್ತಾದನಂತರ ಅದನ್ನು ಹೊರಗೆಳೆದ. ಅದರಲ್ಲೊಂದು ಪೆಟ್ಟಿಗೆ ಬಂತು. ಚಕ್ರವರ್ತಿ ಆ ವೃದ್ಧನಿಗೆ ನೂರು ಮೊಹರಿಗಳನ್ನಿತ್ತು, ಪೆಟ್ಟಿಗೆಯನ್ನು ಅರಮನೆಗೆ ಸಾಗಿಸಿಕೊಂಡು ಹೊರಟ.

ಆ ಪೆಟ್ಟಿಗೆಯಲ್ಲಿ ಏನಿದೆಯೋ ನೋಡಬೇಕೆಂಬ ಕುತೂಹಲ ಉಂಟಾಯಿತು ಚಕ್ರವರ್ತಿಗೆ. ಅಂತಲೇ ಪೆಟ್ಟಿಗೆಯನ್ನು ತನ್ನ ರಹಸ್ಯಮಂದಿರಕ್ಕೆ ಸಾಗಿಸಿದನು. ಮಂತ್ರಿಯ ಸಹಾಯದಿಂದ ಮುಚ್ಚಳವನ್ನು ತೆಗೆಯಿಸಿ, ಒಳಗಿನ ದೃಶ್ಯವನ್ನು ಕಂಡನು.

ಪೆಟ್ಟಿಗೆಯಲ್ಲಿ ಯುವತಿಯೊಬ್ಬಳ ಶರೀರ ಕಾಣಿಸಿತು. ಆಕೆಯ ದೇಹರಕ್ತದಲ್ಲಿ ತೊಯ್ದಿತ್ತು. ಚೆನ್ನಾಗಿ ಪರೀಕ್ಷಿಸಿದ ನಂತರ ಆ ಯುವತಿ ಸತ್ತಿಲ್ಲವೆಂದು ಖಾತರಿಯಾಯಿತು. ಇನ್ನೂ ಉಸಿರಾಡುತ್ತಿರುಳೆಂದು ಖಚಿತವಾಗಿ ತಿಳಿಯಿತು. ಬದುಕುವಳೆಂದು ತೋರಿತು. ಆಕೆಗೆ ತಲೆಯಮೇಲೆ ಬಲವಾದ ಪೆಟ್ಟುಬಿದ್ದು ಅದರಿಂದ ಧಾರೆಯಾಗಿ ರಕ್ತ ಸೋರಿತ್ತು.

ಚಕ್ರವರ್ತಿ ತನ್ನ ವೈದ್ಯನನ್ನು ಕರೆಯಿಸಿ, ಆ ಯುವತಿಯನ್ನು ಬದುಕಿಸಲು ಸಾಧ್ಯಾಸಾಧ್ಯಗಳನ್ನು ವಿಚಾರಿಸಿದನು. ರಾಜವೈದ್ಯನು

ಡಿ. ಡಿ. ಗೋಪಾಲಕೃಷ್ಣ



ತನ್ನ ಶಕ್ತಿಮೀರಿ ಪ್ರಯತ್ನಿಸುವುದಾಗಿ ತಿಳಿಸಿದ. ಆದರೂ ಆಕೆ ಉಳಿದುಕೊಳ್ಳುವ ಲಕ್ಷಣ ತೀರ ಕಡಿಮೆಯೆಂದು ಅರಿಕೆ ಮಾಡಿದ.

ಆ ಯುವತಿ ಯಾರು? ಅವಳನ್ನು ಪೆಟ್ಟಿಗೆಯಲ್ಲಿಟ್ಟು ನದಿಯಲ್ಲಿ ತೇಲಿಬಿಟ್ಟ ದುರ್ಮಾರ್ಗನು ಯಾರೆಂದು ತಿಳಿಯುವ ಮನಸ್ಸಾಯಿತು ಚಕ್ರವರ್ತಿಗೆ. ಮಂತ್ರಿ ಸುದ್ಧಿ ತಿಳಿದುಕೊಂಡು ಬರಲು ನಂಬಿಕೆಯಾದ ಆಳುಗಳನ್ನು ದೇಶದ ಎಲ್ಲಕಡೆಗೂ ಕಳುಹಿಸಿದ. ಆದರೂ ರಹಸ್ಯ ಹೊರಬರಲಿಲ್ಲ.

ಮಾರನೆಯ ದಿನ ಚಕ್ರವರ್ತಿ, ಮಂತ್ರಿಗಳು ಸೇರಿ ಒಂದು ಉಪಾಯ ಹೂಡಿ, ಈರೀತಿ ಕಾರ್ಯರೂಪಕ್ಕೆ ತಂದರು. 'ಮೊನ್ನೆರಾತ್ರಿ ಯಾರೋ ದುರುಳರು ಒಬ್ಬ ಯುವತಿಯನ್ನು



ಕೊಲೆಮಾಡಿ, ಆ ಶವವನ್ನು ಪೆಟ್ಟಿಗೆಯೊಂದರಲ್ಲಿರಿಸಿ, ಅದನ್ನು ಟೈಗ್ರಿಸ್ ನದಿಯಲ್ಲಿ ಎಸೆದಿರುವರು. ಆ ಹಂತಕನನ್ನು ಹಿಡಿಯಲು ನಮ್ಮ ಮಂತ್ರಿಗೆ ಒಂದು ದಿವಸದ ಮಟ್ಟಿಗೆ ಕಾಲಾವಧಿ ಕೊಡಲಾಗಿತ್ತು. ಮಂತ್ರಿಯು ಅಸಮರ್ಥನಾದುದರಿಂದ ಕೊಲೆಪಾತಕನನ್ನು ಹಿಡಿಯಲಾಗಲಿಲ್ಲ. ಆದುದರಿಂದ ಈ ದಿವಸ ಮಧ್ಯಾಹ್ನ ಮಂತ್ರಿಯ ಶಿರವನ್ನು ಬಹಿರಂಗವಾಗಿ ಕಡಿಯಬೇಕೆಂದು ಆಜ್ಞೆಮಾಡಿರುತ್ತೇವೆ. ಪುರನಿವಾಸಿಗಳು ಈ ಶಿಕ್ಷೆಯನ್ನು ಪ್ರತ್ಯಕ್ಷವಾಗಿ ನೋಡಬಹುದು' ಎಂದು ಚಕ್ರವರ್ತಿ ಡಂಗುರ ಹೊಯಿಸಿದ.

ಆದಿವಸ ಮಧ್ಯಾಹ್ನದವೇಳೆಗೆವಧ್ಯಶಿಲೆಯ ಸಮೀಪದಲ್ಲಿ ಸಾವಿರಾರು ಜನ ಸೇರಿದರು. ಹೊತ್ತಿಗೆ ಸರಿಯಾಗಿ ಮಂತ್ರಿಯನ್ನು ಭಟರು ಹಿಡಿಮುರಿಗಟ್ಟಿ ಅಲ್ಲಿಗೆ ಕರೆತಂದರು. ಆಗ ಜನರ ಗುಂಪಿನಿಂದ ತರುಣನೊಬ್ಬನು ಮುಂದೆ ಬಂದು ರಕ್ಷಣಾಧಿಕಾರಿಯೊಂದಿಗೆ "ಅಯ್ಯಾ, ಸತ್ಯ ಹೇಳುತ್ತೇನೆ. ಹಂತಕನು ನಾನು. ಮಂತ್ರಿಯನ್ನು ಉಳಿಸಿ, ನನ್ನ ತಲೆಯನ್ನು ತೆಗೆಸಿರಿ" ಎಂದು ಅಂಗಲಾಚಿದ.

ರಕ್ಷಣಾಧಿಕಾರಿ ಮಂತ್ರಿಯನ್ನು ಬಿಟ್ಟುಕೊಟ್ಟು, ಆ ಯುವಕನನ್ನು ಕರೆದುಕೊಂಡು ಚಕ್ರವರ್ತಿಯ ಬಳಿಗೆ ಬಂದ.

"ಕೊಲೆ ಪಾತಕನು ನೀನೇನೆ? ಆಕೆ ನಿನಗೇನಾಗಬೇಕಿತ್ತು? ನಿನಗೆ ಆಕೆ ಏನಾದರೂ ದ್ರೋಹವೆಣಿಸಿದಳೇನು?" ಎಂದು ಚಕ್ರ

ವರ್ತಿ ಆ ಯುವಕನನ್ನು ಕೇಳಿದ. ಆ ಯುವಕನು ಬಹು ವ್ಯಸನದಿಂದ ಕಂಬನಿ ಸುರಿಸುತ್ತ ಹೀಗೆಂದು ಹೇಳಿದ:

"ಮಹಾಪ್ರಭೂ, ಆ ಯುವತಿ ನನ್ನ ಪತ್ನಿ. ಸಾಧ್ವಿ. ನಾನು ಪಾಪಿ. ಆಕೆಯ ಶೀಲವನ್ನು ಶಂಕಿಸಿ ಕೊಲೆ ಮಾಡಿರುವೆನು. ಭಗವಂತನು ನನಗೆ ಶಿಕ್ಷೆ ವಿಧಿಸಿರುವನು. ನಾನು ಪಶ್ಚಾತ್ತಾಪದಿಂದ ದಹಿಸುತ್ತಿರುವೆನು. ದಯಮಾಡಿ ನನ್ನ ಕಥೆಯನ್ನು ಲಾಲಿಸಿ:

"ನನ್ನ ಪತ್ನಿ ರೋಗಗ್ರಸ್ತಳಾಗಿ ನರಳುತ್ತಿದ್ದಳು. ಆಗ ಆಕೆಗೆ ಮಾವಿನ ಹಣ್ಣು ತಿನ್ನಬೇಕೆಂಬ ಅಪೇಕ್ಷೆಯುಂಟಾಯಿತು. ಅವಳ ಆಶೆಯನ್ನು ಹೇಗಾದರೂ ಈಡೇರಿಸಬೇಕೆಂದು ಮಾವಿನ ಹಣ್ಣಿಗಾಗಿ ನಗರದಲ್ಲೆಲ್ಲಾ ಹುಡುಕಾಡಿದೆ. ಅಕಾಲವಾದುದರಿಂದ ಊರಿನಲ್ಲಿ ಎಲ್ಲೂ ಮಾವಿನಹಣ್ಣು ಕಾಣಿಸಲಿಲ್ಲ. ಬಲ್ಸೋರಾದಲ್ಲಿ ಸಿಗಬಹುದೆಂದು ಯಾರೋ ಸೂಚಿಸಿದರು. ನನ್ನ ಹೆಂಡತಿಯ ಬಯಕೆಯನ್ನು ನೆರವೇರಿಸಲು ತುಂಬಾ ಶ್ರಮಪಟ್ಟು ಬಲ್ಸೋರಾಕ್ಕೆ ಹೋದೆ. ಅಲ್ಲಿ ಹುಡುಕಾಡಿ ಉತ್ಕೃಷ್ಟವಾದ ಮೂರು ಮಾವಿನ ಹಣ್ಣುಗಳನ್ನು ತಂದು ಕೊಟ್ಟೆ. ನನ್ನ ಹೆಂಡತಿ ಅವುಗಳನ್ನು ಆ ರಾತ್ರಿ ತಿನ್ನುತ್ತೇನೆಂದು ಹೇಳಿದಳು.

"ಆ ಸಾಯಂಕಾಲ ನಾನು ಅಂಗಡಿಯಲ್ಲಿದ್ದೆ. ಒಬ್ಬಾನೊಬ್ಬ ಗುಲಾಮ ಒಂದು ಮಾವಿನ ಹಣ್ಣನ್ನು ತಂದು "ಇಂತಹ ಉತ್ತಮವಾದ ಮಾವಿನಹಣ್ಣು ಎಲ್ಲೂ ಸಿಗುವುದಿಲ್ಲ. ಬೇಕೇನು




ನಿಮಗೆ?" ಎಂದು ಕೇಳಿದ. ಸೂಕ್ಷ್ಮವಾಗಿ ನೋಡಲು, ನಾನು ಬಲ್ಸೋರಾದಿಂದ ತಂದ ಹಣ್ಣುಗಳಲ್ಲಿ ಅದೊಂದಾಗಿರುವಂತೆ ತೋರಿತು. 'ಅಪ್ಪಾ, ನಿನಗೆಲ್ಲಿ ದೊರಕಿತು ಈ ಮಾವಿನ ಹಣ್ಣು' ಎಂದು ಕೇಳಿದೆ. ಅದಕ್ಕಾತನು 'ಆಕೆಗೆ ನಾನೆಂದರೆ ಕಡು ಪ್ರೀತಿ. ಆಕೆ ನನಗೆ ಈ ಹಣ್ಣನ್ನು ಕೊಟ್ಟಳು. ಆಕೆಯ ಗಂಡನು ಬಲ್ಸೋರಾದಿಂದ ತಂದುಕೊಟ್ಟನಂತೆ! ನಿಮಗೇನಾದರೂ ಬೇಕಾಗಿದ್ದರೆ ತೆಗೆದುಕೊಳ್ಳಿರಿ' ಎಂದು ಹೇಳಿದ.

"ಅವನ ಮಾತುಗಳನ್ನು ನಾನು ನಂಬಲಿಲ್ಲ. ನನ್ನ ಹೆಂಡತಿ ನೀತಿಗೆಟ್ಟ ಹೆಂಗಸಲ್ಲ. ಆದರೂ ಸತ್ಯಸಂಗತಿಯನ್ನರಿಯಲು ಅಂಗಡಿಯ ಬಾಗಿಲು ಹಾಕಿ ಕೂಡಲೇ ಮನೆಗೆ




ಹೋದೆ. ಮನೆಯಲ್ಲಿ ಎರಡೇ ಹಣ್ಣುಗಳಿದ್ದವು. ಇನ್ನೊಂದು ಹಣ್ಣು ಎಲ್ಲಿಂದು ಮನೆಯಾಕೆಯನ್ನು ಕೇಳಲು, ಆಕೆ ಚಕಿತಳಾಗಿ ತನಗೇನೂ ಗೊತ್ತಿಲ್ಲವೆಂದಳು. ಆಗ ಆ ಆಳಿನ ಮಾತನ್ನು ನಂಬಲೇ ಬೇಕಾಯಿತು. ನಾನು ಹಿಂದುಮುಂದು ಆಲೋಚಿಸದೆ ಒಂದು ದೊಣ್ಣೆಯನ್ನು ತೆಗೆದು ನನ್ನ ಹೆಂಡತಿಯ ತಲೆಯ ಮೇಲೆ ಹೊಡೆದೆ. ಆ ಪೆಟ್ಟಿಗೆ ಆಕೆ ತೀರಿಕೊಂಡಳು. ನಮ್ಮ ಮನೆಯಲ್ಲಿದ್ದ ಹಳೆಪೆಟ್ಟಿಗೆಯಲ್ಲಿ ಆ ಶವವನ್ನಿಟ್ಟು, ಕತ್ತಲಾದ ನಂತರ ಅದನ್ನು ನದಿಯಲ್ಲೆಸೆದು ಮನೆಗೆ ಹಿಂತಿರುಗಿದೆ. ನಾನು ಮನೆಯೊಳಕ್ಕೆ ಪ್ರವೇಶಿಸುತ್ತಿರುವಾಗ ಬೀದಿಯ ಅಂಚಿನಲ್ಲಿ ಒಬ್ಬ ಹುಡುಗನು ಬಿಕ್ಕಿ ಬಿಕ್ಕಿ ಅಳುತ್ತಿರುವ ಸದ್ದು ಕೇಳಿಸಿತು. ಕುತೂಹಲದಿಂದ ಹತ್ತಿರಹೋಗಿ ನೋಡಿದೆ. ಹಾಗೆ ಅಳುತ್ತಿದ್ದವನು ಸಾಕ್ಷಾತ್ ನನ್ನ ಮಗನೇ!

"ಈ ಕತ್ತಲೆಯಲ್ಲಿ ಹೊರಗೇನು ಮಾಡುತ್ತಿರುವೆ? ಏಕೆ ಅಳುತ್ತಿರುವೆಯೋ ಮೂಳ?" ಎಂದು ವಿಚಾರಿಸಿದೆ.

ಅದಕ್ಕೆ ಅವನು "ಅಮ್ಮ ಬಚ್ಚಿಟ್ಟಿದ್ದ ಮಾವಿನ ಹಣ್ಣುಗಳಲ್ಲಿ ಒಂದನ್ನು ತೆಗೆದುಕೊಂಡು ಬೀದಿಗೆ ಓಡಿದೆ. ಆಗ ಬೀದಿಯಲ್ಲಿ ಹೋಗುತ್ತಿದ್ದ ಒಬ್ಬ ಆಳು ನನ್ನನ್ನು ಕಂಡು ನಿನಗೆಲ್ಲಿಂದ ಈ ಹಣ್ಣು ಬಂತೆಂದು ಕೇಳಿದ. 'ನಮ್ಮ ತಾಯಿಗಾಗಿ ನಮ್ಮಪ್ಪನು ಬಲ್ಸೋರಾದಿಂದ ತಂದು ಕೊಟ್ಟ. ಅಮ್ಮನಿಗೆ ತಿಳಿಯದಂತೆ ಒಂದು ಹಣ್ಣನ್ನು ಹಾರಿಸಿತಂದೆ' ಎಂದು ಉತ್ತರ ಕೊಟ್ಟೆ. 'ಛೆ, ಹಾಗೆ ಮಾಡುವುದುಂಟೇ? ಆ ಹಣ್ಣನ್ನು ನನಗೆ ಕೊಡು, ಇಲ್ಲವಾದರೆ ನಿಮ್ಮ ತಾಯಿಗೆ ಹೇಳುತ್ತೇನೆ' ಎಂದು ಹೇಳಿದ ಆ ಆಸಾಮಿ. ನಾನು ಹೆದರಿ ಹಣ್ಣನ್ನು ಅವನಿಗೆ ಕೊಟ್ಟುಬಿಟ್ಟೆ. ಮನೆಗೆ ಹೋದರೆ ಅಮ್ಮ ಹೊಡೆಯುವಳೆಂದು ಹೆದರಿಕೆಯಾಗಿದೆ" ಎಂದ ನನ್ನಮಗ.

ಅಕಾರಣವಾಗಿ ಹೆಂಡತಿಯನ್ನು ಕೊಲೆ ಮಾಡಿದುದಕ್ಕಾಗಿ ನನಗೆ ತುಂಬಾ ವ್ಯಸನವಾಯಿತು. ಮಗನನ್ನು ಕಂಡು ನನ್ನ ದುಃಖ ಹತ್ತುಪಾಲು ಹೆಚ್ಚಾಯಿತು. ಬೆಳಗ್ಗಿನಿಂದ ಆ ಗುಲಾಮನಿಗಾಗಿ ಹುಡುಕುತ್ತಿರುವೆನು. ನನ್ನ ಕಣ್ಣಿಗೇನಾದರೂ ಅವನು ಬಿದ್ದಿದ್ದರೆ ತುಂಡು ತುಂಡು ಮಾಡಿಬಿಡುತ್ತಿದ್ದೆ. ನಿಜವಾಗಿ ನೋಡಿ

ದರೆ ಅವನ ತಲೆ ತೆಗೆಯಬೇಕು. ನಿಷ್ಕಾರಣ ವಾಗಿ ಮಂತ್ರಿಯವರು ಶಿಕ್ಷೆಗೆ ಗುರಿಯಾಗು ತ್ತಾರೆಂದರೆ ನನಗೆ ಅಪಾರವಾದ ಯಾತನೆ ಯಾಯಿತು. ನಡೆದ ಸಂಗತಿಯನ್ನು ಮಹಾ ಪ್ರಭುಗಳಲ್ಲಿ ಅರಿಕೆ ಮಾಡಿಕೊಂಡಿರುತ್ತೇನೆ. ಪ್ರಭುಗಳು ಸೂಕ್ತತೋರಿದಂತೆ ನನಗೆ ಶಿಕ್ಷೆ ವಿಧಿಸಿ, ನನ್ನಂತೆ ದುಡುಕು ಬುದ್ಧಿಯವರಿ ಗೆಲ್ಲಾ ಪಾಠ ಬರುವಂತೆ ಮಾಡಿ" ಎಂದು ತನ್ನ ಕಥೆಯನ್ನು ಮುಗಿಸಿದ ಆ ಯುವಕ.

"ನಿನಗೆ ನಿನ್ನ ಪತ್ನಿಯಲ್ಲಿ ಅಪಾರವಾದ ಪ್ರೇಮವಿರುವುದೆಂದು ಇದರಿಂದ ಗೊತ್ತಾಗು ತ್ತದೆ. ಇಲ್ಲವಾದರೆ ಆಕೆಗಾಗಿ ಬಲ್ಸೋರಾಕ್ಕೆ ಹೋಗಿ ಮಾವಿನ ಹಣ್ಣನ್ನು ತಂದುಕೊಡು ತ್ತಿರಲಿಲ್ಲ. ಆಕೆ ಅಪರಾಧಿ ಎಂಬ ಸಂಪೂರ್ಣ ನಂಬಿಕೆಯಿಂದ ನೀನು ಆಕೆಯನ್ನು ಹೊಡೆ ದಿರುವೆ. ನಿನ್ನಲ್ಲಿ ಅಂತಹ ನಂಬಿಕೆ ಹುಟ್ಟಿಸಿ, ನಾಲ್ಕು ಕಾಸು ಪಡೆಯುವ ಉದ್ದೇಶದಿಂದ, ಸುಳ್ಳು ನುಡಿದವನೇ ಶಿಕ್ಷಾರ್ಹನು. ಆದ ಕಾರಣ ನಿನ್ನನ್ನು ಬಿಡುಗಡೆ ಮಾಡಿರುತ್ತೇವೆ. ನಿನ್ನ ಮಗನಿಂದ ಹಣ್ಣನ್ನು ಅಪಹರಿಸಿ, ನಿನಗೆ ಮಾರಲು ಬಂದ ಗುಲಾಮನನ್ನು ಸೂಕ್ತರೀತಿ ಯಲ್ಲಿ ಶಿಕ್ಷಿಸಲಾಗುವುದು. ನೀನಿನ್ನು ಹೊರಡ ಬಹುದು" ಎಂದ ಚಕ್ರವರ್ತಿ.

"ಮಹಾಪ್ರಭೂ, ನೀವು ಆ ದುಷ್ಟನನ್ನು ಶಿಕ್ಷಿಸುವೆನೆಂದು ಭರವಸೆಯನ್ನು ಕೊಟ್ಟಿರು ವುದರಿಂದ, ನಾನು ಇನ್ನೊಂದು ಕ್ಷಣವಾದರೂ ಜೀವಿಸಲು ಆಶಿಸುತ್ತಿಲ್ಲ. ಬೇಗೆ ನನ್ನನ್ನು ಸುಡು




ತ್ತಿದೆ. ನನಗೆ ಮರಣದಂಡನೆ ವಿಧಿಸಿ, ಈ ನೋವಿನಿಂದ ಕಾಪಾಡಿ" ಎಂದು ಅಂಗಲಾಚಿದ ಆ ಯುವಕ. ಆದರೂ ಚಕ್ರವರ್ತಿ ಅವನ ಕೋರಿಕೆಗೆ ಸಮ್ಮತಿಸಲಿಲ್ಲ.

ಒಬ್ಬ ಮುಗುದೆಯ ಮೇಲೆ ಅಪನಿಂದೆ ಹೊರಿಸಿದ ಗುಲಾಮನನ್ನು ಹಿಡಿದು ದಂಡಿಸ ಬೇಕು. ಇದು ಹೇಗೆ ಸಾಧ್ಯವಾದೀತೆಂದು ಆಲೋಚಿಸುತ್ತಾ ಮಂತ್ರಿ ಆ ಸಾಯಂಕಾಲ ತನ್ನ ಮನೆಯನ್ನು ಸೇರಿದ. ತಲೆಬಾಗಿಲಲ್ಲಿ ಆತನ ಮೊಮ್ಮಗಳು 'ತಾತಾ' ಎಂದು ಕೈ ಚಾಚಿಕೊಂಡು ಎದುರಾಗಿ ಬಂದಳು.

ಮಂತ್ರಿ ಮೊಮ್ಮಗಳನ್ನು ಪ್ರೀತಿಯಿಂದ ಮುದ್ದಾಡುವಾಗ ಮಗುವಿನ ಬಾಯಿಯಿಂದ ಮಾವಿನ ಹಣ್ಣಿನ ವಾಸನೆ ಬಂದಿತು. ಆತನು

ಆಶ್ಚರ್ಯದಿಂದ "ತಾಯೀ, ಎಲ್ಲಿಯದೇ ಮಾವಿನ ಹಣ್ಣು?" ಎಂದು ಕೇಳಿದ.

"ನಮ್ಮ ಗುಲಾಮ ರಹೀಂ ತಂದು ಕೊಟ್ಟ; ಅವನಿಗೆ ಎಲ್ಲೋ ಸಿಕ್ಕಿತಂತೆ" ಎಂದಳು ಮೊಮ್ಮಗಳು.

ಕೂಡಲೇ ಕಳ್ಳನನ್ನು ಹಿಡಿಸಲಾಯಿತು. ಅವನನ್ನು ಕರೆತರಿಸಿ ಮಂತ್ರಿ ಗದರಿಸಲು ತಾನು ಬಾಲಕನನ್ನು ಬೆದರಿಸಿ ಮಾವಿನ ಹಣ್ಣನ್ನು ಕಸಿದುಕೊಂಡೆನೆಂದೂ, ಅದನ್ನು ಸುಳ್ಳುಹೇಳಿ ಮಾರಲು ಪ್ರಯತ್ನಿಸಿದೆನೆಂದೂ, ಅದು ಸಾಧ್ಯವಾಗಲಿಲ್ಲವೆಂದೂ ಹೇಳಿದ. ಆ ಹಣ್ಣನ್ನು ಒಂದುದಿವಸ ತನ್ನ ಮನೆಯಲ್ಲಿಟ್ಟುಕೊಂಡು ಮಾರನೆಯದಿನ ಮಂತ್ರಿಯ ಮೊಮ್ಮಗಳಿಗೆ ಒಂದು ಚೂರನಿತ್ತು, ಉಳಿದುದನ್ನೆಲ್ಲಾ ತಾನೇ ತಿಂದುಬಿಟ್ಟುದುದಾಗಿಯೂ ಸತ್ಯವನ್ನು ಹೇಳಿದ ಗುಲಾಮು ರಹೀಂ.

ಮಾವಿನಹಣ್ಣನ್ನು ಅಪಹಸಿದ ಗುಲಾಮನು ಸಿಕ್ಕಿಬಿದ್ದಿದ್ದಾನೆಂದೂ ಅವನ ವಿಚಾರಣಾ ಸಮಯದಲ್ಲಿ ಹಾಜರಿರಬೇಕೆಂತಲೂ ಯುವಕನಿಗೆ ತಿಳಿಸಲಾಯಿತು. ಅವನು ದಿವಾನಾಖಾನೆಗೆ ಹೋಗಿ ರಹೀಮನನ್ನು ಗುರುತಿಸಿದ. "ವಿಚಾರಣೆ ಪೂರ್ತಿಯಾಗಲು ಇನ್ನೊಂದು ಸಾಕ್ಷಿ ಅತ್ಯಗತ್ಯ. ನೀನು ಶವವನ್ನು ಗುರುತಿಸಬೇಕು" ಎಂದನಾ ಚಕ್ರವರ್ತಿ ಯುವಕನಿಗೆ. ತನಗೆ ಕೊಡುವ ಶಿಕ್ಷೆಯಿದೆಂದು ಭಾವಿಸಿ, ಯುವಕನು ಚಕ್ರವರ್ತಿಯನ್ನು ಹಿಂಬಾಲಿಸಿ ಒಂದು ಕೊಠಡಿಯನ್ನು ಪ್ರವೇಶಿಸಿದ. ಅಲ್ಲಿ ಒಂದು ಹಾಸಿಗೆಯ ಮೇಲೆ ತನ್ನಪತ್ನಿಯ ಶರೀರವನ್ನು ಕಂಡು ಯುವಕನಿಗೆ ದುಃಖ ಉಕ್ಕಿಬಂತು. ಮರುಕ್ಷಣವೇ ಆಕೆ ಕಣ್ಣು ತೆರೆದು, ತನ್ನಕಡೆ ತಿರುಗಿ ಮಂದಹಾಸವನ್ನು ಬೀರಲು ಯುವಕನ ಆಶ್ಚರ್ಯಕ್ಕೆ ಮಿತಿಯಿಲ್ಲದಾಯಿತು. ಅವನು ತನ್ನ ದುಡುಕುಬುದ್ಧಿಗೆ ಕ್ಷಮಾಯಾಚನೆ ಮಾಡಿದ.

ಚಕ್ರವರ್ತಿ ರಹೀಮನನ್ನು ಕಠಿನಶಿಕ್ಷೆಗೆ ಒಳಪಡಿಸಲಿಲ್ಲ. ಏಕೆಂದರೆ ಯಾವ ಹುಡುಗನಿಂದ ಆತ ಹಣ್ಣನ್ನು ಕಸಿದುಕೊಂಡನೋ, ಅದೇ ಹುಡುಗನ ತಂದೆಗೇ ಆ ಹಣ್ಣನ್ನು ಮಾರಲು ಪ್ರಯತ್ನಿಸುತ್ತಿರುವೆನೆಂಬ ಅಂಶವನ್ನು ಆ ಗುಲಾಮನು ಅರಿತಿರಲಿಲ್ಲ.






ವತ್ಸರಾಜ್ಯಕ್ಕೆ ಉದಯನನು ರಾಜನಾಗಿದ್ದನು. ಕೌಶಾಂಬಿನಗರ ಆತನ ರಾಜಧಾನಿ. ಯೌಗಂಧರಾಯನನು ಆತನ ಪ್ರಧಾನ ಮಂತ್ರಿ. ಉದಯನನು ಯುವಕ; ಸುಂದರಾಂಗನು. ವೀಣೆ ನುಡಿಸುವುದರಲ್ಲಿ ಅಗ್ರಗಣ್ಯ. ಪ್ರಶಸ್ತವಾದ ಘೋಷವತಿ ಎಂಬ ದಿವ್ಯವಾದ ವೀಣೆ ಆತನ ಹತ್ತಿರವಿತ್ತು.

ರಾಜ್ಯಭಾರವನ್ನು ಮಂತ್ರಿಗಳಿಗೆ ಒಪ್ಪಿಸಿ, ಉದಯನನು ವೀಣೆ ನುಡಿಸುವುದರಲ್ಲಿಯೂ, ಅದರ ಸಹಾಯದಿಂದ ಕಾಡಾನೆಗಳನ್ನು ಹಿಡಿಯುವುದರಲ್ಲಿಯೂ ತನ್ನ ಕಾಲವನ್ನೆಲ್ಲಾ ಕಳೆಯುತ್ತಿದ್ದನು. ಆತನು ಅಡವಿಯಲ್ಲಿ ಕುಳಿತು ಘೋಷವತಿಯನ್ನು ನುಡಿಸಲು ಪ್ರಾರಂಭಿಸಿದಕೂಡಲೇ ಆ ಗಾನದನಿಗೆ ಮನಸೋತು ಆನೆಗಳು ಗುಂಪುಗುಂಪಾಗಿ ಬಂದು ರಾಜಪರಿವಾರದ ವಶವಾಗುತ್ತಿದ್ದುವು. ತನಗೆ ಅನುರೂಪಳಾದ ಅಂದಗಾರ್ತಿ ಕನ್ಯೆ ಯಾರೂ ಇಲ್ಲವೆಂದು ಭಾವಿಸಿ ಉದಯನನು ವಿವಾಹವನ್ನೂ ಮಾಡಿಕೊಂಡಿರಲಿಲ್ಲ.

ಆದರೆ ಆತನಿಗೆ ಸಕಲರೂಪಗಳಲ್ಲೂ ಅನುರೂಪಳಾದ ಕನ್ಯೆ ಉಜ್ಜಯಿನಿಯ ರಾಜನಾದ ಚಂಡಮಹಾಸೇನನ ಮಗಳು ವಾಸವದತ್ತೆ. ಆದರೆ ಉಜ್ಜಯಿನಿ ರಾಜ್ಯವಂಶಕ್ಕೂ, ಕೌಶಾಂಬಿ ರಾಜವಂಶಕ್ಕೂ ಪರಸ್ಪರ ವೈರ ಬಹಳ ಕಾಲದಿಂದ ಬೆಳೆದಿತ್ತು. ತನ್ನ ಮಗಳನ್ನು ಉದಯನನಿಗೆ ಕೊಟ್ಟು ವಿವಾಹಮಾಡಬೇಕೆಂಬ ಮನಸ್ಸಿದ್ದರೂ ಸಹ ಬಾಯಿಬಿಟ್ಟು ಕೇಳಲು ಚಂಡಮಹಾಸೇನನಿಗೆ ತನ್ನ ಸ್ಥಾನವಾದದ ಅಂತಸ್ತು ಅಡ್ಡಬಂದಿತ್ತು. ಅದರಿಂದ ಉಜ್ಜಯಿನಿರಾಜನು ಒಂದು ಉಪಾಯವನ್ನು ಯೋಚಿಸಿದ. 'ನೀವು ಕೆಲವು ದಿನ ಉಜ್ಜಯಿನಿಗೆ ಬಂದು ನಮ್ಮ ಮಗಳಿಗೆ ವೀಣೆ ಕಲಿಸಿಕೊಡಬೇಕು' ಎಂದು ತನ್ನ ದೂತನ ಸಂಗಡ ಉದಯನನಿಗೆ ಹೇಳಿ ಕಳುಹಿಸಿದ.

ಈ ಆಹ್ವಾನ ಕೇಳಿದಕೂಡಲೇ ಉದಯನನು ಕೋಪಾವಿಷ್ಟನಾದ. ಆದರೆ ಮಂತ್ರಿಗಳ ಸಲಹೆಯ ಪ್ರಕಾರ ತನ್ನ ಆಗ್ರಹವನ್ನು ನುಂಗಿಕೊಂಡು " ನಿಮ್ಮ ಮಗಳಿಗೆ ನನ್ನಿಂದ ವೀಣೆ

ಪಿ. ಡಿ. ರಾವು




ಕಲಿಯುವ ಅಪೇಕ್ಷೆಯಿದ್ದರೆ ಆಕೆಯನ್ನು ಕೌಶಾಂಬಿಗೆ ಕಳುಹಿಸಿಕೊಡಿ" ಎಂದು ಮಾರುತ್ತರ ಕಳುಹಿಸಿದ.

ವಾಸವದತ್ತಳಿಗೆ ವೀಣೆ ಕಲಿಸುವಸಮಯದಲ್ಲಿ ಉದಯನನು ಆಕೆಯ ಸೌಂದರ್ಯಕ್ಕೆ ವಶನಾಗಿ ಆಕೆಯ ಕೈಬೇಡುವನೆಂದು ಚಂಡಮಹಾಸೇನನ ನಂಬಿಕೆ. ಆದರೂ ತನ್ನ ಮಗಳನ್ನು ಉದಯನನಲ್ಲಿಗೆ ಕಳುಹಿಸುವುದು ತನ್ನ ಅಂತಸ್ತಿಗೆ ಅಪಮಾನವೆಂದು ಆತನ ಭಾವನೆ. ಎಂತಲೇ ತನ್ನ ಭಾವಿ ಅಳಿಯನನ್ನು ಉಪಾಯದಿಂದ ಉಜ್ಜಯಿನಿಗೆ ಕರೆತರಬೇಕೆಂದು ನಿಶ್ಚಯಿಸಿದ.

ಬಡಗಿಗೆ ಹೇಳಿ ಪ್ರಪಂಚದಲ್ಲಿ ಎಲ್ಲೂ ಇಲ್ಲದಂತಹ ಭಾರಿ ಆನೆಯೊಂದನ್ನು ಆತನು ತಯಾರು ಮಾಡಿಸಿದ. ಅದೊಂದು ಸಣ್ಣಗುಡ್ಡದಷ್ಟಿತ್ತು. ಅದರ ಹೊಟ್ಟೆಯಲ್ಲಿ ಚಂಡಮಹಾಸೇನನ ಭಟರು ಅಡಗಿಕೊಂಡಿದ್ದರು. ಆ ಆನೆಯನ್ನು ಹಿಂದುರಾತ್ರಿ ಕೌಶಾಂಬಿನಗರದ ಸುತ್ತಮುತ್ತಲಿನ ಅರಣ್ಯದಲ್ಲಿಟ್ಟರು. ಮಾರನೇಯ ದಿನ ಉದಯನನಿಗೊಂದು ಸುದ್ದಿ ಬಂದಿತು— ತಮ್ಮ ಅಡವಿಯಲ್ಲಿ ಎಲ್ಲಿಂದಲೋ ಭಾರಿ ಆನೆಯೊಂದು ಬಂದು ಮೇಯುತ್ತಿರುವುದೆಂದು. ಅಂತಹ ಆನೆಯನ್ನು ಹಿಡಿಯದೆ ನಿದ್ರೆಮಾಡಬಾರದೆಂದು ಉದಯನನು ತನ್ನ ಪರಿವಾರ ಮತ್ತು ವೀಣೆಯೊಂದಿಗೆ ಅಡವಿಗೆ ಹೋದನು. ಅಷ್ಟುದೂರದಲ್ಲಿ ಮಾಯದ ಆನೆಯನ್ನು ಕಂಡ. ಅದು ತನ್ನ ಸೊಂಡಲನ್ನೂ, ಬಾಲವನ್ನೂ, ಆಡಿಸುತಿತ್ತು. ಭಾರಿ ಭಾರಿ ಆನೆಗಳೂ ಸಹ ಅದರಮುಂದೆ ಸಣ್ಣ ಮರಿಗಳಹಾಗೆ ತೋರಿದವು. ಅಂತಹ ಆನೆಯನ್ನು ತನ್ನ ಸಂಗೀತದಿಂದ ಆಕರ್ಷಿಸಬೇಕೆಂದು ಉದಯನನು ವೀಣೆ ನುಡಿಸಲಾರಂಭಿಸಿದನು.

ಉದಯನನು ಸಾಯಂಕಾಲದ ವರೆವಿಗೆ ವೀಣೆ ನುಡಿಸಿದರೂ ಆ ಆನೆ ಕೇವಲ ಹತ್ತು ಗಜದಷ್ಟು ದೂರಮಾತ್ರ ಮುಂದೆ ಬಂದಿತ್ತು. ಇನ್ನು ಆಲಸ್ಯಮಾಡಿದರೆ ಕತ್ತಲಾಗಬಹುದೆಂದು ಉದಯನನು ತನ್ನ ವೀಣೆಯನ್ನು ನುಡಿಸುತ್ತಾ ಆನೆಯ ಸಮೀಪಕ್ಕೆ ಹೋದ. ಆತನ ಸಂಗಡಿಗರು ಬಹಳ ಹಿಂದೆ ಇದ್ದರು. ಉದಯನನು ತೀರಾ ಸನಿಯಕ್ಕೆ ಬಂದ ಕೂಡಲೇ ಆನೆಯ ಹೊಟ್ಟೆಯಲ್ಲಿ ಅಡಗಿ ಕುಳಿ

ತಿದ್ದ ಚಂಡಮಹಾಸೇನನ ಭಟರು ಉದಯನನನ್ನು ಬಂಧಿಸಿ ಕಟ್ಟಿ, ಅಡವಿಮಾರ್ಗದಿಂದ ಉಜ್ಜಯಿನಿಗೆ ತೆಗೆದುಕೊಂಡು ಹೊರಟರು.

ಉದಯನನು ತನ್ನ ಶತ್ರುವಾದ ಚಂಡಮಹಾಸೇನನ ಬಂದಿಯಾದನು. ಆದರೂ ಚಂಡಮಹಾಸೇನನು ಆತನಿಗೆ ಯಾವ ತರಹ ಲೋಪವೂ ಇಲ್ಲದಂತೆ ಸಮಸ್ತವಾದ ಅನುಕೂಲಗಳನ್ನು ಒದಗಿಸಿಕೊಟ್ಟಿದ್ದನು. ತನ್ನ ಮಗಳಾದ ವಾಸವದತ್ತಳನ್ನು ವೀಣೆ ಕಲಿಯಲು ಆತನ ಹತ್ತಿರಕ್ಕೆ ಕಳುಹಿಸಿದನು. ವಾಸವದತ್ತಳನ್ನು ನೋಡಿದಾಕ್ಷಣದಿಂದ ಉದಯನನು ತಾನು ಸೆರೆಯಾಳೆಂಬುದನ್ನೇ ಮರೆತುಬಿಟ್ಟನು. ಆಕೆ ತನ್ನ ಎದುರಿಗೆ ಕುಳಿತು ವೀಣೆ ನುಡಿಸುತ್ತಿದ್ದರೆ ಪರಮಾನಂದ!

ಅಲ್ಲಿ, ಕೌಶಾಂಬಿನಗರದ ರಾಜಧಾನಿಯಲ್ಲಿ, ಬಹಳ ಗಡಿಬಿಡಿಯಾಗಿತ್ತು. ತಮ್ಮ ರಾಜನು ಕೈದಿಯಾದ ವರ್ತಮಾನ ಕೇಳಿ ಪ್ರಜೆಗಳು ಆಗ್ರಹಪೂರಿತರಾಗಿ ಉಜ್ಜಯಿನಿಯ ಮೇಲೆ ದಂಡೆತ್ತಿ ಹೋಗಬೇಕೆಂದು ಒತ್ತಾಯ ಮಾಡಿದರು. ದೂರಾಲೋಚನೆಯುಳ್ಳ ಯೌಗಂಧರಾಯನು ಪ್ರಜೆಗಳಿಗೆ ತಾಳ್ಮೆ ವಹಿಸುವಂತೆ ಬುದ್ಧಿ ಹೇಳಿದನು.

ಮೋಸದಿಂದ ಶತ್ರುಗಳನ್ನು ವಶಪಡಿಸಿಕೊಂಡ ತಮ್ಮ ರಾಜನನ್ನು ಯುಕ್ತಿಯಿಂದ ಕರೆತರುವೆನೆಂದು ಯೌಗಂಧರಾಯನು ಪ್ರಜೆಗಳಿಗೆ ಭರವಸೆ ನೀಡಿದನು.

ಮಾರನೇಯ ದಿನವೇ ಯೌಗಂಧರಾಯನು ರಾಜ್ಯಭಾರವನ್ನು ತುಂಬಾ ಎಚ





ರಿಕೆಯಿಂದ ನಡೆಸುವಂತೆ ಇತರ ಮಂತ್ರಿಗಳಿಗೆ ಹೇಳಿ, ವಸಂತಕನೆಂಬುವನನ್ನು ಸಂಗಡ ಕರೆದುಕೊಂಡು ಹೊರಟನು. ದಾರಿಯಲ್ಲಿ ವಿಂಧ್ಯಪ್ರಾಂತ್ಯದಲ್ಲಿ ಪುಳಿಂದಕನೆಂಬ ರಾಜನಿದ್ದನು. ಆತನು ಉದಯನನ ಆಪ್ತಮಿತ್ರ. ಯೌಗಂಧರಾಯನು ಪುಳಿಂದಕನಿಗೆ ನಡೆದುದನ್ನೆಲ್ಲಾ ವಿವರಿಸಿ, ಸೇನೆಯನ್ನು ಸಿದ್ಧಪಡಿಸಿಡುವಂತೆ ಎಚ್ಚರಿಸಿ, ವಸಂತಕನೊಂದಿಗೆ ಉಜ್ಜಯಿನಿಗೆ ಹೊರಟ.

ದಾರಿಯಲ್ಲಿದ್ದ ಒಂದು ಸುಡುಗಾಡಿನಲ್ಲಿ ಯೌಗಂಧರಾಯನೂ ವಸಂತಕನೂ ತಮ್ಮ ತಮ್ಮ ವೇಷವನ್ನು ಬದಲಾಯಿಸಿ ಕೊಂಡರು. ವಸಂತಕನು ನಗು ಬರುವ ವೇಷ ಧರಿಸಿದ. ಯೌಗಂಧರಾಯನು ಹುಚ್ಚನಂತಾದ.

ಇಬ್ಬರೂ ಬೇರೆಬೇರೆ ಹೊರಟರು. ಅಲ್ಲಿಂದ ಮೊದಲು ವಸಂತಕನು ನಗರವನ್ನು ಪ್ರವೇಶಿಸಿ ನೆಟ್ಟಗೆ ರಾಜಭವನದ ಹತ್ತಿರಕ್ಕೆ ಹೋಗಿ ತನ್ನ ನಕಲಿ ಪ್ರಾರಂಭಿಸಿದನು. ಅದನ್ನು ನೋಡಿ ಆನಂದಿಸಲು ಅಂತಃಪುರದ ಸ್ತ್ರೀಯರು, ದಾಸಿಯರು ನೆರೆದರು. ವಾಸವದತ್ತಳೂ ಸಹ ಸಂಗೀತಸಾಧನೆಯನ್ನು ಮರೆತು, ಈ ತಮಾಷೆ ನೋಡಲು ಬಂದಳು. ಆ ಸಮಯದಲ್ಲಿ ಒಂಟಿಯಾಗಿ ಕುಳಿತಿದ್ದ ಉದಯನನ ಹತ್ತಿರಕ್ಕೆ ಹುಚ್ಚನಂತೆ ವೇಷ ಧರಿಸಿದ್ದ ಯೌಗಂಧರಾಯನು ಹೋದನು.

ನಿರ್ಬಂಧದಲ್ಲಿದ್ದ ಉದಯನನನ್ನು ನೋಡಿದ ತಕ್ಷಣ ಯೌಗಂಧರಾಯನ ಕಣ್ಣಿನಿಂದ ನೀರು ಮಿಡಿಯಿತು. ಅದನ್ನು ಕಂಡು ಉದಯನನು ಯೌಗಂಧರಾಯನನ ಗುರುತು ಹಚ್ಚಿದನು. "ಪ್ರಭೂ ಹೇಗಾದರು ಮಾಡಿ ವಾಸವದತ್ತಳನ್ನು ನಿಮ್ಮಕಡೆ ಒಲಿಸಿಕೊಂಡಿರಾದರೆ, ನಾನು ನಿಮ್ಮನ್ನು ಈ ಸೆರೆಯಿಂದ ತಪ್ಪಿಸುವೆನು. ಆದುದರಿಂದ ನೀವು ಈ ಪ್ರಯತ್ನದಲ್ಲಿರಿ. ಮತ್ತೆ ನಾನು ಕಾಣಿಸಿಕೊಳ್ಳುವೆ" ಎಂದು ಉಪಾಯವನ್ನು ಹೇಳಿ ಯೌಗಂಧರಾಯನು ಮರೆಯಾದ.

ಉದಯನ ಮತ್ತು ವಾಸವದತ್ತ ಈ ಮುಂಚೆಯೇ ರಹಸ್ಯವಾಗಿ ಪರಸ್ಪರ ಪ್ರೇಮಿಸುತ್ತಿದ್ದುದರಿಂದ ವಾಸವದತ್ತ ಆತನ ಪಕ್ಷ ವಹಿಸಲು ಬಹಲಕಾಲ ಹಿಡಿಯಲಿಲ್ಲ. ಅವಕಾಶ ಸಿಕ್ಕಿದಕೂಡಲೇ ತಂದೆಗೆ ತಿಳಿಸ

ದಂತೆ ಉದಯನನೊಂದಿಗೆ ಪಲಾಯನವಾಗಲು ವಾಸವದತ್ತ ಒಪ್ಪಿಕೊಂಡಳು.

ಚಂಡಮಹಾಸೇನನ ಹತ್ತಿರವಿದ್ದ ಆನೆಗಳಲ್ಲಿ ಎಲ್ಲಕ್ಕಿಂತಲೂ ಅತಿವೇಗವಾಗಿ ಓಡುವ ಆನೆ ಭದ್ರಾವತಿ. ಅದನ್ನು ನಡೆಯಿಸುವ ಮಾವಟಿ ಆಷಾಢ. ಆ ಆನೆಯನ್ನು ಬಹುಮಾನವಾಗಿ ವಾಸವದತ್ತಳಿಗೆ ಕೊಟ್ಟಿದ್ದ ಚಂಡಮಹಾಸೇನ. ಯೌಗಂಧರಾಯನು ಆಷಾಢನಿಗೆ ಹೇರಳವಾಗಿ ಹಣತೆತ್ತು ತನ್ನ ಪಕ್ಷಕ್ಕೆ ತಿರುಗಿಸಿಕೊಂಡಿದ್ದ. ಉದಯನನನ್ನು ಬಂಧವಿಮುಕ್ತನನ್ನಾಗಿ ಮಾಡಲು ಯೌಗಂಧರಾಯನು ಒಂದು ಉಪಾಯವನ್ನು ಆಲೋಚಿಸಿದ. ಅದನ್ನು ವಸಂತಕನಿಗೆ ತಿಳಿಸಿ, ತಾನು ಎರಡು ದಿನ ಮುಂಚಿತವಾಗಿ ಹೊರಟು ಪುಳಿಂದಕ ನಗರವನ್ನು ಸೇರಿಕೊಂಡ.

ಒಂದುದಿನ ರಾತ್ರಿ ರಾಜನ ಗಜಸಾಲೆಯ ಅಧಿಕಾರಿಗೆ ಕಳ್ಳು ಕುಡಿಸಿದರು. ವಾಸವದತ್ತ, ಉದಯನನಿಗೆ ಬಿಲ್ಲುಬಾಣಗಳನ್ನೂ, ಕತ್ತಿಗುರಾಣಿಗಳನ್ನೂ ತಂದು ಕೊಟ್ಟಳು. ಅರ್ಧರಾತ್ರಿವೇಳೆಗೆ ಸರಿಯಾಗಿ, ಉದಯನ, ವಾಸುವದತ್ತೆ ಮತ್ತು ವಸಂತಕರು ಭದ್ರಾವತಿ ಎಂಬ ಆನೆಯನ್ನೇರಿ ಹೊರಟರು. ರಾಜಪ್ರಾಸಾದದಲ್ಲಿ ಅಡ್ಡಬಂದ ಭಟರನ್ನು ಯಮಪುರಿಗೆ ಕಳುಹಿಸಿದ ಉದಯನ. ಭದ್ರಾವತಿ ಪುಳಿಂದಕನಗರದ ಕಡೆ ಹೊರಟಿತು.

ಕೈದಿಯಾಗಿದ್ದ ಉದಯನನು ತನ್ನ ಮಗಳೊಂದಿಗೆ ತಪ್ಪಿಸಿಕೊಂಡನೆಂಬ ವಿಷಯ



ಚಂಡಮಹಾಸೇನನಿಗೆ ಹತಶೇಷರಾದ ದೂತರಿಂದ ತಿಳಿಯುವ ಹೊತ್ತಿಗೆ ಎಲ್ಲಾ ಮೀರಿ ಹೋಗಿತ್ತು. ಚಂಡಮಹಾಸೇನನು ಆನೆಯನ್ನು ಹತ್ತಿ, ತನ್ನ ಪರಿವಾರದೊಂದಿಗೆ ಹೊರಟ. ಆದರೆ, ಎಷ್ಟೇ ಪ್ರಯತ್ನಪಟ್ಟರೂ ಭದ್ರಾವತಿಯ ಹತ್ತಿರ ಸೇರಲು ಬೇರೆ ಯಾವ ಆನೆಗೂ ಸಾಧ್ಯವಾಗಲಿಲ್ಲ.

ವಿಂಧ್ಯಪ್ರಾಂತವನ್ನು ಸೇರುವ ವೇಳೆಗೆ ಭದ್ರಾವತಿ ದಣಿದು, ಬಾಯಾರಿ ಅಕಾಲಮರಣಕ್ಕೆ ತುತ್ತಾಯಿತು. ಅಲ್ಲಿಂದ ಉದಯನ, ವಾಸವದತ್ತ, ವಸಂತಕರು ಕಾಲುನಡಿಗೆಯಿಂದಲೇ ಪುಳಿಂದಕ ನಗರಕ್ಕೆ ಹೋಗಬೇಕಾಯಿತು. ದಾರಿಯಲ್ಲಿ ಕಳ್ಳರು ಅಟಕಾಯಿಸಿದರು. ಉದಯನನು ಅವರನ್ನೆಲ್ಲಾ

ತರಿದು ಚೆಲ್ಲಿದನು. ಎಂದೂ ಅಂತಹ ಪ್ರದೇಶದಲ್ಲಿ ನಡೆದು ಅಭ್ಯಾಸವಿಲ್ಲದ ವಾಸವದತ್ತ ನಾನಾ ಅವಸ್ಥೆ ಪಡಬೇಕಾಯಿತು. ಅಂತೂ ಇಂತೂ, ಹಾಗೂ ಹೀಗೂ, ಅವರು ಮೂವರು ಪುಳಿಂದಕನಗರವನ್ನು ತಲುಪಿದರು. ಆ ಸಮಯಕ್ಕೆ ಕೌಶಾಂಬಿಯಿಂದ ಸಹ ಸೈನ್ಯ ಅಲ್ಲಿಗೆ ಬಂದು ಸೇರಿತು. ಒಂದು ಮೈದಾನದಲ್ಲಿ ಗುಡಾರಗಳನ್ನು ಹಾಕಿದರು.

ಚಂಡಮಹಾಸೇನನೊಂದಿಗೆ ಒಂದು ತೀರ್ಮಾನಕ್ಕೆ ಬರುವ ಉದ್ದೇಶದಿಂದ ಉದಯನನೂ ನಗರಕ್ಕೆ ಹೋಗದೆ ಬಿಡಾರದಲ್ಲೇ ಇದ್ದುಬಿಟ್ಟನು. ಉಜ್ಜಯಿನಿ ಸೈನ್ಯದಮೇಲೆ ಬೀಳಲು ಸರ್ವಸನ್ನಾಹಗಳನ್ನೂ ಮಾಡಲಾಯಿತು. ಇಷ್ಟರಲ್ಲಿ ಚಂಡಮಹಾಸೇನನು ದೂತನೊಬ್ಬನೊಂದಿಗೆ ಉದಯನನಿಗೆ ಈ ವರ್ತಮಾನ ಕಳುಹಿಸಿದ :

'ರಾಜನೇ, ನೀನು ನನ್ನ ಮಗಳನ್ನು ಕರೆದುಕೊಂಡು ಹೋದುದಕ್ಕೆ ನಾನು ಕೋಪಗೊಂಡಿಲ್ಲ. ನಿಮ್ಮಿಬ್ಬರಿಗೆ ವಿವಾಹ ಮಾಡುವ ಸಲುವಾಗಿಯೇ ನಿನ್ನನ್ನು ಬಂಧಿಸಲಾಯಿತು. ಆದುದರಿಂದ ನಿಮ್ಮಿಬ್ಬರ ವಿವಾಹ ಯಥಾವಿಧಿಯಾಗಿ ನಡೆಯಬೇಕೆಂದು ನನ್ನ ಅಭಿಲಾಷೆ. ಆದರೆ ನನ್ನದೊಂದೇ ಒಂದು ಕೋರಿಕೆ. ಕೆಲವು ದಿನಗಳು ವ್ಯವಧಿಕೊಟ್ಟರೆ ನನ್ನ ಮಗನಾದ ಗೋಪಾಲಕನು ಬಂದು ತನ್ನ ತಂಗಿಯ ವಿವಾಹವನ್ನು ಕ್ರಮವಾಗಿ ನಡೆಯಿಸುವನು'

ಈ ಸುದ್ದಿ ಕೇಳಿ ಉದಯನನಿಗೆ ತೃಪ್ತಿಯುಂಟಾಯಿತು. ತನ್ನ ತೌರುಮನೆಯವರೊಂದಿಗೆ ಕಲಹವೇರ್ಪಡಲಿಲ್ಲವೆಂದು ವಾಸವದತ್ತ ಸಂತೋಷಚಿತ್ತಳಾದಳು.

ಎಲ್ಲರೂ ಒಟ್ಟಾಗಿ ಕೌಶಾಂಬಿನಗರಕ್ಕೆ ಹೊರಟರು. ವಿವಾಹ ಮುಹೂರ್ತವನ್ನು ನಿಶ್ಚಯಿಸಿ ಅಟ್ಟಹಾಸದಿಂದ ವಿವಾಹಸಿದ್ಧತೆಗಳಾದವು. ವಿವಾಹಕ್ಕೆ ವಾಸವದತ್ತಳ ಅಣ್ಣ ಗೋಪಾಲಕನೂ, ಉದಯನನ ಮಿತ್ರ ಪುಳಿಂದಕನೂ ಅಲ್ಲದೆ ಅನೇಕ ಮಂದಿ ರಾಜರೂ ಬಂದಿದ್ದರು. ಉದಯನ ಮತ್ತು ವಾಸವದತ್ತರ ವಿವಾಹ ಅತ್ಯಂತವೈಭವಪೂರಿತವಾಗಿ ನೆರವೇರಿತು.



# ಚಂದ್ರ

ಚಂದ್ರನನ್ನು ಕುರಿತು ಕಳೆದ ತಿಂಗಳು ಸ್ವಲ್ಪ ತಿಳಿದುಕೊಂಡಿರುತ್ತೀರಿ. ಈ ಸಲ ಇನ್ನಷ್ಟು ವಿಷಯಗಳನ್ನು ತಿಳದುಕೊಳ್ಳಿ.

* ಒಂದಾನೊಂದು ಕಾಲದಲ್ಲಿ ಭೂಮಿ ಜ್ವಲಿಸುತ್ತಿದ್ದ ದ್ರವ ಗೋಳವಾಗಿತ್ತು. ಭೂಮಿಯಲ್ಲಿದ್ದ ಪದಾರ್ಥ ಸ್ವಲ್ಪ ಬೇರ್ಪಟ್ಟು, ಕಾಲಕ್ರಮೇಣ ಗಟ್ಟಿಯಾಗಿ ಚಂದ್ರನಾದನೆಂದು ಶಾಸ್ತ್ರಜ್ಞರು ಹೇಳುತ್ತಿರುವರು. ಹಿಂದೆ ಚಂದ್ರನು ಭೂಮಿಗೆ ತೀರಾ ಹತ್ತಿರದಲ್ಲಿದ್ದು ಭೂಮಿಯ ಸುತ್ತಲೂ ತಿರುಗುತ್ತಿದ್ದನು. ಕ್ರಮೇಣ ಭೂಮಿಗೆ ದೂರವಾದನು.

* ಭೂಮಿಯ ಸುತ್ತಲೂ ಚಂದ್ರನು ಪ್ರದಕ್ಷಿಣೆ ಮಾಡುವಮಾರ್ಗ ಕೋಳಿ ಮೊಟ್ಟೆಯ ಆಕಾರವಾಗಿರುತ್ತದೆ. ಅದರಿಂದಲೇ ಚಂದ್ರನು ಒಂದು ಸಲ ಭೂಮಿಗೆ ತುಂಬಾ ಹತ್ತಿರವಾಗುತ್ತಾನೆ, ಒಂದು ಸಲ ತುಸ ದೂರವಾಗುತ್ತಾನೆ.

* ಭೂಮಿಯಂತೆ ಚಂದ್ರನು ತನ್ನ ಸುತ್ತ ತಾನೇ ತಿರುಗುತ್ತಾ ಸ್ವಪ್ರದಕ್ಷಿಣೆ ಮಾಡುತ್ತಿರುವನು. ಭೂಮಿಯಸುತ್ತಲೂ ಒಂದು ಸಲಸುತ್ತಿ ಬರುವಷ್ಟರಲ್ಲಿ ಚಂದ್ರನು ತನ್ನಸುತ್ತ ತಾನೇ ಒಂದುಸಾರಿಗೆ ತಿರುಗುವನು. ಅಂತಲೇ ಭೂಮಿಯಕಡೆಗೆ ಚಂದ್ರನ ಮುಖವೊಂದೇ ಕಾಣಿಸುವುದು. ಚಂದ್ರನ ಹಿಂಭಾಗದಲ್ಲಿ ಹೇಗಿರುತ್ತದೆಯೋ ನಾವು ಕಾಣುವ ಅವಕಾಶವಿಲ್ಲ. (ಕೊಠಡಿಯ ನಡುವೆ ದೀಪವನ್ನಿರಿಸಿ, ಅದರ ಕಡೆಗೆ ಮುಖ ಮಾಡಿ, ಸುತ್ತಾ ಒಂದುಸಾರಿ ಪ್ರದಕ್ಷಿಣೆಮಾಡಿ. ಅಷ್ಟರಲ್ಲೇ ನೀವೊಂದುಸಾರಿ ಪ್ರದಕ್ಷಿಣೆ ಮಾಡಿರುತ್ತೀರಿ.)

* ಭೂಮಿ 24 ಗಂಟೆಗಳಿಗೊಂದು ಸಲ ತನ್ನಸುತ್ತಲು ತಾನೇ ತಿರುಗುತ್ತದೆ. 24 ಗಂಟೆಗಳು ನಮಗೊಂದು ದಿನ. ಚಂದ್ರ ತನ್ನ ಸುತ್ತ ಮತ್ತು ಭೂಮಿಯಸುತ್ತ ತಿರುಗಿ ಬರಲು 27 ದಿನ, 7 ಗಂಟೆ, 43 ನಿಮಿಷ, 11 ಸೆಕೆಂಡುಕಾಲ ಹಿಡಿಯುತ್ತದೆ.

* ಚಂದ್ರನ ದಿನ 27 ದಿನ ಚಿಲ್ಲರೆ. ಇದರಲ್ಲಿ ಅರ್ಧಭಾಗ—ಸುಮಾರು 14 ದಿನ ಹಗಲು, 14 ದಿನ ರಾತ್ರಿ. ಚಂದಮನಲ್ಲಿ ಹಗಲು ಸಹಿಸಲಾಗದಷ್ಟು ಬಿಸಿಲು, ರಾತ್ರಿ ಅನುಭವಿಸಲಾರದಷ್ಟು ಛಳಿ. ಭೂಮಿಯಮೇಲೆ ಬೀಳುವ ಸೂರ್ಯಕಾಂತಿ ಅನೇಕ ಮೈಲಿಗಳ ಗಾಳಿಯನ್ನು ದಾಟಿ, ತೀಕ್ಷ್ಣತೆ ಕಡಿಮೆಯಾಗಿ ನಮ್ಮ ಹತ್ತಿರ ಬರುವುದು. ಅದರಿಂದಲೇ ನಾವು ಅದನ್ನು ತಾಳಲು ಶಕ್ಯವಾಗಿದೆ. ಚಂದಮಾಮನಲ್ಲಿ ಯಾವ ವಿಧವಾದ ಗಾಳಿಯೂ ಇಲ್ಲ. ಅದರಿಂದಲೇ ಅಲ್ಲಿನ ಬಿಸಿಲು ನಾವು ಊಹಿಸಲಾರದಷ್ಟು ತೀವ್ರವಾಗಿರುತ್ತದೆ. ಮತ್ತೊಂದು ವಿಚಿತ್ರವೇನೆಂದರೆ ಸೂರ್ಯಕಾಂತಿಯಲ್ಲಿರುವ ನೀಲಿಕಿರಣಗಳು ವಾತಾವರಣದಮೂಲಕ ಚದುರಿ ನಾಲ್ಕುಕಡೆಯೂ ಪ್ರಸರಿಸುವುದರಿಂದ ನಮಗೆ ಆಕಾಶವು ನೀಲಿಬಣ್ಣವಾಗಿ ಕಾಣಿಸುವುದು. ಆದರೆ ವಾತಾವರಣವಿಲ್ಲದ ಚಂದ್ರಮಂಡಲದಿಂದ ನೋಡಿದಪಕ್ಷಕ್ಕೆ ಆಕಾಶವು ಟಾರುಬಣ್ಣದಂತೆ ಕಪ್ಪಾಗಿ ಕಾಣಿಸುವುದು. ಅದರಲ್ಲಿ ಸೂರ್ಯನು ಅನೇಕ ಸಾವಿರ ಚಂದ್ರನಷ್ಟು, ದೇದೀಪ್ಯಮಾನನಾಗಿ ಪ್ರವೇಶಿಸುವನು.




ಪೂರ್ವಕಾಲದಲ್ಲಿ ಹಸ್ತಿನಾವತಿಯಲ್ಲಿ ಶಿವದತ್ತನೆಂಬ ವಿಪ್ರಸಿದ್ದನು. ಆತನು ತುಂಬಾ ಐಶ್ವರ್ಯವಂತ. ಆದರೂ ಆತನು ತನ್ನ ಜೀವನದಲ್ಲಿ ಸುಖವನ್ನು ಕಂಡಿರಲಿಲ್ಲ. ಏಕೆಂದರೆ ಆತನ ಪತ್ನಿ ಮಹಾ ಕ್ರೂರಾತ್ಮಳು; ಗಯ್ಯಾಳಿ. ಅಂತಹ ಗಯ್ಯಾಳಿಯೊಂದಿಗೆ ಸಂಸಾರ ಸಾಗಿಸಲಾರದೆ ಶಿವದತ್ತನು ಒಂದು ದಿನ ಮನೆಯಿಂದ ಮಾಯವಾಗಿ ಸನ್ಯಾಸವನ್ನು ಸ್ವೀಕರಿಸಿದನು.

ಶಿವದತ್ತನಿಗೆ ಮೂವರು ಮಕ್ಕಳಿದ್ದರು. ಹಿರಿಯವನಿಗೆ ವಿವಾಹವಾಗಿ ಸೊಸೆ ಮನೆಗೆ ಬಂದಕೂಡಲೇ ಅತ್ತೆ ಆಕೆಗೆ ನಾನಾ ಹಿಂಸೆ ಕೊಡಲು ಪ್ರಾರಂಭಿಸಿದಳು. ಆ ಕಷ್ಟಗಳನ್ನೆಲ್ಲಾ ಕೆಲವುದಿನ ಸಹಿಸಿದಳು ಆಕೆ. ಅವಕಾಶ ಸಿಕ್ಕಿದಕೂಡಲೇ ಹಿರಿಯ ಸೊಸೆ ತೌರುಮನೆಗೆ ಹೊರಟುಹೋದಳು. ಆಕೆಯ ಹಿಂದೆಯೇ ಅವಳ ಗಂಡನೂ ಅತ್ತೆಮನೆ ಸೇರಿಕೊಂಡು ಅಲ್ಲಿಯೇ ಇದ್ದುಬಿಟ್ಟ. ತರುವಾಯ ಎರಡನೇಯವನಿಗೆ ಮದುವೆಯಾಗಿ ಅವನ ಹೆಂಡತಿ ಸಂಸಾರಮಾಡಲು ಮನೆಗೆ ಬಂದಳು. ಅವಳನ್ನೂ ಸಹ ಗಯ್ಯಾಳಿ ಅತ್ತೆ ಕಾಡಲಾರಂಭಿಸಿದಳು. ಪರಮಸಾಧ್ವಿಯಾದ ಆ ಎರಡನೇ ಸೊಸೆ ಅತ್ತೆ ಕೊಡುತ್ತಿದ್ದ ಕಿರುಕುಳವನ್ನು ತಡೆಯಲಾರದೆ, ತೌರುಮನೆಗೆ ಹೋದರೆ ಅಗೌರವಕ್ಕೆ ಪಾಲಾಗಬೇಕೆಂದೆಣಿಸಿ, ಒಂದುದಿನ ನೇಣು ಹಾಕಿಕೊಂಡು ಸತ್ತುಹೋದಳು. ಆ ದುಃಖದ ಮನೋವ್ಯಾಧಿಯಿಂದ ಎರಡನೇ ಮಗನು ಹಾಸಿಗೆಹಿಡಿದು ಕೆಲವು ದಿನಗಳಿಗೆಲ್ಲಾ ಮರಣಹೊಂದಿದನು.

ತನ್ನ ಅಣ್ಣಂದಿರಿಬ್ಬರಿಗಾದ ಗತಿಯನ್ನು ನೋಡಿದ ಮೂರನೇಯವನು–ವಸುದತ್ತ–ತನ್ನ ತಾಯಿಗೆ ಪಾಠ ಕಲಿಸಲು ನಿರ್ಧರಿಸಿದ. ಒಂದು ದಿನ ನೆರೆಯ ಊರಿಗೆ ಹೋಗಿ ಐದಡಿ ಎತ್ತರದ ಮರದಬೊಂಬೆಯನ್ನು ಮಾಡಿಸಿದ.

ಒಂದು ದಿನ ಅರ್ಧರಾತ್ರಿಯಲ್ಲಿ ಆ ಬೊಂಬೆಯನ್ನು ಗಾಡಿಯಲ್ಲಿ ತಂದು ತಮ್ಮ ಮನೆ ಪಕ್ಕದಲ್ಲಿಯೇ ಇದ್ದ ಬೇರೊಂದು ಮನೆಯಲ್ಲಿರಿಸಿ, ಆ ಮನೆಗೆ ಚಿಲಕಹಾಕಿ, ಬಾಗಿಲ

ಆರ್. ಕಮಲಾಕ್ಷಿ

ಹತ್ತಿರ ಒಬ್ಬ ದಾಸಿಯನ್ನು ಕಾವಲಿರಿಸಿದ. ಮೆಲ್ಲನೆ ತಾಯಿಯ ಬಳಿಗೆ ಬಂದು "ಅಮ್ಮಾ, ನಾನು ಮದುವೆ ಮಾಡಿಕೊಂಡು ಬಂದಿದ್ದೇನೆ. ನನ್ನ ಹೆಂಡತಿ ಆ ಮನೆಯಲ್ಲಿದ್ದಾಳೆ ಹೊಡೆದಾಟ ಬಡಿದಾಟಗಳು ನಡೆಯುವುವು. ಆದುದರಿಂದ ನಾನು ಅವಳನ್ನು ಪಕ್ಕದ ಮನೆಯಲ್ಲಿ ಇಳಿಸಿದ್ದೇನೆ. ಅವಳು ಇಲ್ಲಿಗೆ ಬರುವುದು ಬೇಡ, ನೀನು ಅಲ್ಲಿಗೆ ಹೋಗಲೂ ಬೇಡ," ಎಂದ.

ಆಗ ತಾಯಿ ಸರಿ ಎಂದು ಒಪ್ಪಿಕೊಂಡರೂ, ಹಿರಿಯ ಸೊಸೆಗಳಮೇಲಿನ ಸೇಡನ್ನು ಮೂರನೇಯವಳಮೇಲೆ ತೀರಿಸಿಕೊಳ್ಳುವ ಅವಕಾಶವಿಲ್ಲವಲ್ಲಾ ಎಂದು ಮನದೊಳಗೇ ಕುದಿಯುತ್ತಿದ್ದಳು. ಒಂದು ದಿನ ಮಗನು ಮನೆಯಲ್ಲಿ ಇಲ್ಲದ ಸಮಯ ನೋಡಿ ಆಕೆ ಒನಕೆಯಿಂದ ತಲೆಬಡಿದುಕೊಂಡು, ಬೊಬ್ಬೆಯಿಡ ತೊಡಗಿದಳು. ಅಕ್ಕಪಕ್ಕದಲ್ಲಿದ್ದ ಜನ ಅಲ್ಲಿ ಸೇರಿದರು. ಮಗನೂಸಹ ಆಗಲೇ ಅಲ್ಲಿಗೆ ಬಂದ. ಎಲ್ಲರಿಗೂ ಗಾಬರಿಯಾಗಿತ್ತು. ಏನು ನಡೆಯಿತೆಂದು ಕೇಳಿದರು ನೆರೆದಿದ್ದ ಜನ. "ಅಯ್ಯೊ, ಅಪ್ಪಾ ಏನು ಹೇಳಲಿ. ನನ್ನ ಸೊಸೆ ಅಕಾರಣವಾಗಿ ಮನೆಯೊಳಕ್ಕೆ ನುಗ್ಗಿ ಒನಕೆಯಿಂದ ನನ್ನ ತಲೆ ಗಾಯಗೊಳಿಸಿ, ಏನೂ ಅರಿಯದವಳಂತೆ ಒಳಗೆ ಹೋಗಿ ಕದವನ್ನಿಕ್ಕಿಕೊಂಡಿದ್ದಾಳೆ" ಎಂದು ಬಿಕ್ಕಿ ಬಿಕ್ಕಿ ಅಳುತ್ತಾ ಹೇಳಿದಳು.

"ಬಹಳ ಅನ್ಯಾಯವಿದು" ಎಂದು ಕೆಲವರು ನೆರೆಮನೆಯೊಳಕ್ಕೆ ನುಗ್ಗಿ ನೋಡಲು, ಅಲ್ಲಿ ಒಂದು ಮರದಬೊಂಬೆ ಹೊರತು ಮತ್ತೆ ಯಾರೂ ಇರಲಿಲ್ಲ.

"ಇವಳೇ ನನ್ನ ಹೆಂಡತಿ. ನನ್ನ ತಾಯಿಯನ್ನು ಒನಕೆಯಿಂದ ಹೊಡೆದು, ಒಳಗೆ ಬಂದು ಕದವನ್ನು ಹಾಕಿಕೊಂಡಳು" ಎಂದು ವಸುದತ್ತ ಎಲ್ಲರಿಗೂ ಹೇಳಿದ. ಆತನ ಮಾತಿನಲ್ಲಿ ವ್ಯಂಗವಿತ್ತು. ಇದನ್ನು ಕೇಳಿ ಎಲ್ಲರೂ ಗಯ್ಯಾಳಿಯನ್ನು ಅಪಹಾಸ್ಯ ಮಾಡಿದರು. ಕೆಲವರು ಛೀ ಮಾರಿಹಾಕಿದರು.

ತರುವಾಯ ವಸುದತ್ತನು ಉತ್ತಮ ಕನ್ಯೆಯನ್ನು ನೋಡಿ ಮದುವೆಯಾದ. ಮತ್ತೆ ಆ ಹುಡುಗಿಯ ಗೋಜಿಗೆ ಆ ಗಯ್ಯಾಳಿ ಅತ್ತೆ ಹೋಗಲೇ ಇಲ್ಲ!






# ಮುದುಕಿಯ ಮಾತುಗಾರಿಕೆ

ಧಾರಾನಗರದ ರಾಜನಾದ ಭೋಜನೂ, ಆತನ ಆಸ್ಥಾನದಲ್ಲಿದ್ದ ಮಾಘನೂ ಒಂದು ದಿನ ಸಾಯಂಕಾಲ ವಾಯುವಿಹಾರಾರ್ಥ ವಾಗಿ ಹೊರಟರು. ಮಾತಿನಭರದಲ್ಲಿ ಅವರು ವೇಳೆಯನ್ನು ಮರೆತು ಬಹಳದೂರ ಹೋಗಿ ಬಿಟ್ಟರು. ಕತ್ತಲೆ ಆಯಿತು. ಅವರು ಅರ ಮನೆಗೆ ಹಿಂತಿರುಗಲು ಯೋಚಿಸುವ ವೇಳೆಗೆ ತೀರಾ ಕತ್ತಲಾಗಿ ದಾರಿ ತಿಳಿಯದಾಯಿತು. ಯಾರನ್ನಾದರೂ ಕೇಳಿ ತಿಳಿದುಕೊಳ್ಳಲು ಅವರು ಮತ್ತಿಷ್ಟು ದೂರ ನಡೆದು ಒಂದು ಗುಡಿಸಲಿನ ಹತ್ತಿರಕ್ಕೆ ಬಂದರು. ಅಲ್ಲಿ ಅವರಿ ಗೊಬ್ಬ ಮುದುಕಮ್ಮ ಕಾಣಿಸಿದಳು.

ಭೋಜರಾಜನು ಸಮೀಪಕ್ಕೆ ಹೋಗಿ ಆಕೆಯೊಂದಿಗೆ "ಅಜ್ಜೀ, ಈ ದಾರಿ ಎಲ್ಲಿಗೆ ಹೋಗುವುದು?" ಎಂದು ಕೇಳಿದ.

"ಎಲ್ಲಿಗೆ ಹೋಗಬೇಕೋ ದಾರಿಯಲ್ಲಿ ಹೋಗುವವರಿಗೆ ತಿಳಿಯಬೇಕೇ ಹೊರತು ದಾರಿಗೇನು ತಿಳಿಯುತ್ತದೆ ಮಗೂ? ನೀವು ಯಾರು?" ಎಂದು ಕೇಳಿದಳು ಮಾತುಗಾರ ಳಾದ ಮುದುಕವ್ವ. ರಾಜನು ಬೆರಗಾದನು.

"ನಾವು ಪ್ರಯಾಣಿಕರು" ಎಂದ ಮಾಘ.

"ಸೃಷ್ಟಿಯಲ್ಲಿ ಸೂರ್ಯ ಚಂದ್ರರಿಬ್ಬರೇ ಪ್ರಯಾಣಿಕರು. ನೀವೇನು ಸೂರ್ಯ ಚಂದ್ರರೇ?" ಎಂದಳು ಮುದುಕಿ.

"ನಾವು ಕ್ಷಣಕಾಲದ ಅತಿಥಿಗಳು" ಎಂದು ನುಡಿದ ಮಾಘ.

"ಹಣ, ಯೌವನ— ಇವೆರಡೇ ಕ್ಷಣಿಕ ವಾದ ಅತಿಥಿಗಳು. ನೀವು ಹಾಗೆ ಕಾಣಿ ಸೋಲ್ಲ" ಎಂದಳು ಮುದಕವ್ವ.

"ನಾವು ಪಾಲಕರು" ಎಂದ ಭೋಜರಾಜ.

"ಇಂದ್ರ ಮತ್ತು ಯಮರು ಮಾತ್ರವೇ ಪಾಲಕರು. ನೀವು ಅವರಲ್ಲವಷ್ಟೇ?" ಎಂದು ಕೇಳಿದಳು ಅಜ್ಜಿ.

"ಆದರೆ ನಾವು ಸಹನಶೀಲರು ಎಂದು ತಿಳಿಯಬಹುದು" ಎಂದ ಭೋಜ.

"ಭೂಮಿ ಮತ್ತು ಸ್ತ್ರೀ ಮಾತ್ರವೇ ಸಹನೆ ಯುಳ್ಳವರು" ಎಂದಳು ಮುದುಕಿ.

"ನಾವು ವಿರಾಗಿಗಳು" ಎಂದ ಮಾಘ.

"ವಿನೋದಯ್ಯ"

"ವಿರಾಗಿಗಳೆಂದು ಹೇಳಿಕೊಳ್ಳುವಂತಹವು ಶನಿ ಮತ್ತು ಸಂತೃಪ್ತಿ ಮಾತ್ರವೇ" ಎಂದಳು ಮುದುಕವ್ವ.

"ನಾವು ಪರದೇಶಿಗಳು" ಎಂದ ಭೋಜರಾಜ.

"ಜೀವಾತ್ಮ ಮತ್ತು ಮರಹೀರುವ ನೀರು ಮಾತ್ರ ಪರದೇಶಿಗಳು" ಎಂದಳು ವೃದ್ಧೆ.

"ನಾವು ಬಡವರು" ಎಂದ ಮಾಘ.

"ಕುರಿಮರಿ ಮತ್ತು ಹೆಣ್ಣುಹುಡುಗಿ ಮಾತ್ರ ಬಡವರು" ಎಂದಳಾ ಮುದುಕವ್ವ.

"ನಾವು ಎಲ್ಲಾ ಕೆಲಸಗಳಿಗೂ ಸಮರ್ಥರು" ಎಂದ ಭೋಜರಾಜ

"ಸಾಮರ್ಥ್ಯವುಳ್ಳವು ಅನ್ನ ಮತ್ತು ನೀರು" ಎಂದಳು ಮುದುಕಿ.

"ಅಜ್ಜೀ ನಾವು ಸೋತುಹೋದೆವು" ಎಂದ ಮಾಘ. ಮುದುಕಿಯ ಪ್ರಚಂಡ ವಾದಕ್ಕೆ ತಡೆಯಲಾರದೆ. ಭೋಜರಾಜನೂ ಸೋತುಹೋದುದನ್ನು ಒಪ್ಪಿಕೊಂಡನು.

"ಋಣಬಾಧೆಯುಳ್ಳವರೂ, ಹೆಣ್ಣು ಮಗುವನ್ನು ಹೆತ್ತವರೂ ಹೊರತು ಬೇರೆ ಯಾರರೂ ಸೋಲುವುದಿಲ್ಲ. ಮಗೂ! ಅಲ್ಲ ಇದು ವರೆವಿಗೂ, ತಾವುಗಳು ಯಾರೋ ಹೇಳಲೇ ಇಲ್ಲವಲ್ಲಾ? ಹೇಳಿದರೆ ನನ್ನ ಕೈಲಾದ ಸಹಾಯ ಮಾಡುವೆನು" ಎಂದಳು ಆ ಮಾತುಬಲ್ಲ ಮುದುಕಿ.

ಮಾಘನು ತನ್ನ ಪಾಂಡಿತ್ಯವನ್ನೆಲ್ಲಾ ಮೂಟೆಕಟ್ಟಿ, "ಅಜ್ಜೀ, ಇವರು ಬೋಜರಾಜರು, ನನ್ನನ್ನು ಮಾಘನೆಂದು ಕರೆಯುತ್ತಾರೆ. ನಾವು ಅರಮನೆಗೆ ದಾರಿ ತಿಳಿಯದೆ ಕತ್ತಲೆಯಲ್ಲಿ ತೊಳಲಾಡುತ್ತ ಇಲ್ಲಿಗೆ ಬಂದು ನಿನ್ನನ್ನು ಕಂಡೆವು," ಎಂದು ಹೇಳಿದ.

"ಆಮಾತು ಈ ಮೊದಲೇ ಹೇಳಿದ್ದರೆ ಸೊಗುಸಾಗಿರುತಿತ್ತು. ಈ ದಾರಿಯಲ್ಲೇ ನೆಟ್ಟಗೆ ಮುಂದೆ ಅರ್ಧಗಾವುದ ಹೋಗಿ; ನಿಮ್ಮ ಅರಮನೆ ಸಿಗುತ್ತದೆ" ಎಂದಳು ಮುದುಕಿ.

ಭೋಜರಾಜನು ಅರಮನೆಯನ್ನು ಸೇರಿಕೊಂಡನು. ಮರುದಿನ ಬೆಳಗ್ಗೆ ತನ್ನ ಭಟರ ಸಂಗಡ ಆ ಚಾಣಾಕ್ಷಳಾದ ಮುದುಕಿಗೆ ಅಕ್ಷರಕ್ಕೊಂದು ಲಕ್ಷನಾಣ್ಯಗಳನ್ನು ಬಹುಮಾನವಾಗಿ ಕಳುಹಿಸಿಕೊಟ್ಟ.



## ಮಾಯಾ ಚಕ್ರ (ಹಿಂಬದಿಯ ಚಿತ್ರಕಥೆ-೩)

ರಾಜನ ಎಚ್ಚರಿಕೆಯೇ ರಾಣಿಯ ಕುತೂಹಲವನ್ನು ಕೆರಳಿಸಿತ್ತು. ಆ ರಾತ್ರಿ ಮಲಗುವ ಮನೆಯಲ್ಲಿ ರಾಜ ಗಾಢನಿದ್ರೆಯಲ್ಲಿ ಮಗ್ನನಾಗಿದ್ದ. ಆಗ ರಾಣಿಯ ಕೈ ಅವನ ಮುಖಕ್ಕೆ ತಗಲಿತು. ಆ ಮುಖವು ಏನೋ ವ್ಯತ್ಯಾಸವಾಗಿರುವಂತೆ ಭಾಸವಾಯಿತು. ಕುತೂಹಲದಿಂದ ಎದ್ದು ಕುಳಿತು ದಿಟ್ಟಿಸಿನೋಡಿದಳು.

ಏನಾಶ್ಚರ್ಯ! ರಾಜನ ಮುಖವು ಕತ್ತೆಯ ಮುಖದಂತೆ ಕಾಣಿಸಲಿಲ್ಲ. ಸುಂದರನಾದ ರಾಜಯುವಕನ ಮುಖವಾಗಿ ಕಾಣಿಸಿತು. ಅವಳ ಸಂತೋಷಕ್ಕೆ ಮೇರೆ ಇರಲಿಲ್ಲ. ದೀಪವನ್ನು ರಾಜನ ಮುಖದ ಹತ್ತಿರ ಹಿಡಿದು ನೋಡಿ ನೋಡಿ ಉಬ್ಬಿಹೋಗುತ್ತಿದ್ದಳು. —'ಇಷ್ಟು ಸುಂದರ ಮುಖವುಳ್ಳ ನನ್ನಗಂಡ ಕತ್ತೆಯ ಮುಖವಾಗಿದ್ದನೇಕೆ?' ಎಂಬ ಪ್ರಶ್ನೆ ಅವಳ ಹೃದಯದಿಂದ ಎದ್ದು ಬರತೊಡಗಿತು.

ದೀಪ ಕಣ್ಣಿಗೆ ಚುಚ್ಚಿದಂತಾಗಿ ತಟಕ್ಕನೆ ಎಚ್ಚರವಾಯಿತು ರಾಜನಿಗೆ. ಆಗ ರಾಣಿ "ಸ್ವಾಮಿ, ನಿಮ್ಮ ಮುಖ ಆಗ ಹಾಗಿತ್ತು, ಈಗ ಹೀಗಿದೆ; ಇದೇನು, ತಿಳಿಯಬೇಕೆಂಬ ಕುತೂಹಲ ತಾಳದಾಗಿದೆ" ಎಂದು ಪ್ರಶ್ನಿಸಿದಳು.

ಕೂಡಲೇ ರಾಜ ತುಂಬಾ ಚಿಂತೆಯಿಂದ—"ಅಯ್ಯೋ ನಿರ್ಭಾಗ್ಯಳೆ, ಬೆಳಗ ವರೆಗೆ ಮಾತಾಡಿಸಬೇಡವೆಂದರೆ ಕೇಳಲಿಲ್ಲ ನೀನು. ಪೂರ್ತಿಶಾಪ ವಿಮುಕ್ತಿಯಾಗುವ ಮೊದಲೇ ನೀನು ದುಡುಕಿ ಮಾತಾಡಿದಿ. ಇದೋ ಶಾಪ ಮತ್ತೆ ನನ್ನನ್ನು ಅಂಟಿಬಿಟ್ಟಿತು. ಇದುವರೆಗೆ ಮದುವೆಯ ಪ್ರಯತ್ನದಲ್ಲಿದ್ದ ನನ್ನನ್ನು ಅವಳು ಎಳೆಯಲು ಶಕ್ತಳಾಗಲಿಲ್ಲ. ಈಗ ಎಳೆಯುತ್ತಿದ್ದಾಳೆ ನನ್ನನ್ನು ಆ ರಾಕ್ಷಸಿ! ಅಯ್ಯೋ! ಹೋಗುತ್ತಿದ್ದೇನೆ ಅವಳ ಕೆಂಪುವನದ ಕೋಟೆಗೆ. ಆ ರಾಕ್ಷಸಿಯ ಅಡಿಯಾಳು ನಾನಿನ್ನು!—" ಹೇಳುತ್ತಾ ರಾಜ ಮಾಯವಾಗಿ ಹೋದ. ಮಾಯವಾಗುತ್ತಿರುವಾಗ ಅವನಮುಖ, ಮತ್ತೆ ಕತ್ತೆಯಹಾಗೇ ಆಗಿರುವುದನ್ನು ರಾಣಿ ನೋಡಿದಳು. ಪಾಪ! ರಾಣಿಯ ಮೇಲೆ ದುಃಖದ ಪರ್ವತವೇ ಮಗುಚಿತು. ಗಂಡನನ್ನು ಹುಡುಕುತ್ತಾ ಹೊರಟಳು.

ಅವಳು ದಿಕ್ಕುದೆಸೆ ತಿಳಿಯದೆ ಹೋಗುವಾಗ, ರಾಜನಿಗೆ ವರವಿತ್ತ ಅದೇ ದೇವತೆ ಅವಳಮುಂದೆ ತೋರಿ—"ದುಃಖಿಸಬೇಡಮ್ಮ. ಎಲ್ಲಾ ನಾ ಬಲ್ಲೆ. ನಿನ್ನ ಅನುರಾಗದ ಸಾಧನೆಯೇ ರಾಜನನ್ನು ಕಾಪಾಡಬೇಕು. ಇಗೋ ಈ ಮಂತ್ರ ಮುಂಗುರವನ್ನು ಧರಿಸಿಕೊ. ಕಾರ್ಯ ಸಿದ್ಧಿಯಾಗುತ್ತದೆ. ಹೀಗೆ ಮುಂದೆ ಹೋಗು" ಎಂದು ಒಂದು ಉಂಗುರವನ್ನು ಅವಳಿಗೆ ಕೊಟ್ಟು, ಅದನ್ನು ಉಪಯೋಗಿಸುವ ವಿಧಾನವನ್ನೂ ತಿಳಿಸಿ ಮಾಯವಾದಳು. ಸ್ವಲ್ಪ ಸಮಾಧಾನವಾಯಿತು ರಾಣಿಗೆ.

## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ 10 ರೂ.

1955 ಮಾರ್ಚಿ ಸಂಚಿಕೆಯಲ್ಲಿ ಪ್ರಕಟಿಸುವ ಫೋಟೋಗಳ ಮಾದರಿ :





ಮೇಲಿನ ಫೋಟೋಗಳಿಗೆ ಒಂದಕ್ಕೊಂದು ಸಂಬಂಧಿಸಿದಂತಿರುವ ಒಂದು ಜತೆ (ಎರಡು) ಶೀರ್ಷಿಕೆಗಳನ್ನು ಪೋಸ್ಟು ಕಾರ್ಡಿನಲ್ಲಿ ಬರೆದು ಈ ಕೆಳಗಿನ ವಿಳಾಸಕ್ಕೆ, ಜನವರಿ 7 ನೇ ತಾರೀಕಿನೊಳಗೆ ನಮಗೆ ಬಂದು ತಲಪುವಂತೆ ಕಳಿಸತಕ್ಕದ್ದು. ನಂತರ ಬಂದವುಗಳನ್ನು ಗಮನಿಸುವುದಿಲ್ಲ.

ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದ್ರಾಸು – 26.

---

### ಈ ತಿಂಗಳ ಫೋಟೋ ಶೀರ್ಷಿಕೆಯ ಸ್ಪರ್ಧೆಯ ಫಲಿತ

ಮೊದಲನೇ ಫೋಟೋ : ನನ್ನೊಡನೇ ನಲಿಯುವೆ

ಎರಡನೇ ಫೋಟೋ: ನನ್ನೊಡನೇ ಯೋಚಿಸುವೆ

ಕಳಿಸಿದವರು : ಜಿ. ಯಸ್. ಕೃಷ್ಣನ್, 671. ಪಾಠಶಾಲಾಸ್ಟ್ರೀಟ್;
ನಂಜನಗೂಡು, (ಮೈಸೂರುಸ್ಟೇಟ್.)

ಬಹುಮತಿ ರೂ. 10/–ನ್ನು ಈ ತಿಂಗಳಿನಲ್ಲಿ ಕಳುಹಿಸಲ್ಪಡುತ್ತದೆ.



# ವಾರ್ತೆಗಳು-ವಿಶೇಷಗಳು

**ಕ**ಳೆದವರ್ಷ ನವೆಂಬರ್ ಒಂದರಿಂದ ಪುದುಚೇರಿ, ಕರೇಕಾಲ್, ಮಾಹೆ, ಯಾನಾಂ ಪ್ರಾಂತಗಳು ಭಾರತದೇಶದೊಂದಿಗೆ ಸೇರಿಹೋದುವು. ಭಾರತ ಸರಕಾರವು ಅನುಸರಿಸಿಕೊಂಡು ಬಂದ ಶಾಂತಿವಿಧಾನಗಳ ಪರಿಣಾಮವಾಗಿ ಏನೊಂದು ಸಂಘರ್ಷಣೆಯ ಬಿಸಿಬೇಗೆಯಿಲ್ಲದೆ ಈ ಚರಿತ್ರಪ್ರಸಿದ್ಧವಾದ ಒಳ್ಳೆಯ ಬದಲಾವಣೆಯಾಯಿತು.

* * *

**ಕ**ಳೆದವರ್ಷ ಅಕ್ಟೋಬರ್ ತಿಂಗಳಿನ ಅಂತ್ಯದಲ್ಲಿ ನಾವ್ನೊಮೆದ್ವೆದೆವ್, ಪೆಟ್ರೋವಿಚ್ ಎಂಬ ಇಬ್ಬರು ರಷ್ಯನ್ನರು ಪಾರಾಷೂಟ್‌ಗಳ ಸಹಾಯದಿಂದ ಉತ್ತರಧ್ರುವಪ್ರಾಂತದಲ್ಲಿ ಇಳಿದರಂತೆ. ಈ ಪ್ರಾಂತಕ್ಕೆ ಮೊತ್ತಮೊದಲು ಬಂದಿಳಿದವರು ಇವರೇ. ಶಾಸ್ತ್ರಪರಿಶೀಲನೆ ಮಾಡಲು ತಕ್ಕ ಸ್ಥಳವನ್ನು ನೋಡಲು ಇವರು ಇಲ್ಲಿಗೆ ಇಳಿಸಲ್ಪಟ್ಟರಂತೆ.

**ಕ**ಳೆದವರ್ಷ ಅಕ್ಟೋಬರ್ ಆಖೈರಿನಲ್ಲಿ ಟೋಕಿಯೋ ನಗರದಲ್ಲಿ ಶ್ರೀಮತಿ ವಿಜಯಲಕ್ಷ್ಮಿಪಂಡಿತರಿಗೆ ಬಹುದೊಡ್ಡ ಸನ್ಮಾನವು ಜರುಗಿತು. ಅಲ್ಲಿ ಅವರು ಪತ್ರಿಕಾ ಪ್ರತಿನಿಧಿಗಳೊಂದಿಗೆ ಮಾತಾಡುತ್ತ ಜಾಪಾನಿನಲ್ಲಿ ಮಕ್ಕಳು ಅಳುವುದಿಲ್ಲ ಎಂದರು.

* * *

**ಧಾ**ರವಾಡ, ಹುಬ್ಬಳ್ಳಿಗಳ ನಡುವೆ ನಾಗರಿಕರಿಗೆ ವಿಮಾನ ಪ್ರಯಾಣದ ಸೌಕರ್ಯವನ್ನು ಒದಗಿಸಲು ಧಾರವಾಡದ ಶ್ರೀ ಎನ್. ಎಮ್. ಗೌಡನಾಯಕರು ಪ್ರಯತ್ನಪಡುತ್ತಿರುವುದಾಗಿ ತಿಳಿದುಬಂದಿದೆ.

* * *

**ಉ**ತ್ತಮ ಕೆಲಸ ಮಾಡಿದ ಗ್ರಾಮ ರಕ್ಷಕದಲಗಳಿಗೆ ಜಿಲ್ಲೆಗೊಂದರಂತೆ ಢಾಲನ್ನು ಪಾರಿತೋಷಕವಾಗಿ ಕೊಡಲು ಬೊಂಬಾಯಿ ಸರಕಾರವು ನಿರ್ಧಾರಮಾಡಿದೆ.



ಕಳೆದ ನವಂಬರ್ 14 ರಂದು ಭಾರತ ಪ್ರಧಾನರಾದ ಜವಹರಲಾಲ್‌ನೆಹರುರವರ 66 ನೆಯ ಹುಟ್ಟುಹಬ್ಬವು ಭಾರತದಾದ್ಯಂತ ಆಚರಿಸಲಾಯಿತು. ದೇಶದ ಬೇರೆ ಬೇರೆ ಕಡೆ ಗಳಿಂದ ನೆಹರುಗಳಿಗೆ 50 ಲಕ್ಷ ರೂಪಾಯಿ ಬೆಲೆಬಾಳುವ ಉಡುಗೊರೆಗಳು ಸೇರಿದ್ದುವು. ಇವುಗಳಲ್ಲಿ ಹೊಸ ಶಾಲೆಗಳೂ, ಭೂಮಿ ಗಳೂ, ಪುಸ್ತಕಗಳೂ, ಲೈಬ್ರೆರಿ, ವ್ಯಾಯಾಮ ಕೇಂದ್ರಗಳಿಗೆ ಉಪಯೋಗಕ್ಕೆ ಬರುವ ಸಾಮಗ್ರಿಗಳೂ ಇದ್ದವು. ಆ ದಿನವನ್ನು ಬಾಲರ ದಿನವಾಗಿ ಕೊಂಡಾಡಿದರು.

ಢಿಲ್ಲಿಯಲ್ಲಿ ನೇಷನಲ್ ಸ್ಟೇಡಿಯಮ್‌ನಲ್ಲಿ ಲಕ್ಷ ಹುಡುಗರು ಅಂದು ಕೂಡಿದರು. 66 ಹುಡುಗರು ಬಿಳಿಯ ಭೂಷಣದಿಂದ ಅಲಂ ಕೃತರಾಗಿ ಸ್ಟೇಡಿಯಮ್ ದ್ವಾರದಲ್ಲಿ ನೆಹರು ಗಳನ್ನು ಸ್ವಾಗತ ಮಾಡಿ ಪುಷ್ಪಮಾಲೆ ಹಾಕಿದರು. ಬೇರೆಬೇರೆ ಶಾಲೆಗಳ ಪತಾಕೆ ಗಳು ಹಾರಿದುವು. ನೆಹರು ಬಿಳಿಯ ಪಾರಿ ವಾಳವನ್ನು ಹಾರಿಸಿದರು. (ಪಾರಿವಾಳವು ಶಾಂತಿಚಿಹ್ನೆ) ಕೂಡಲೇ ಹುಡುಗರು ಬಿಟ್ಟ 66 ಬಿಳಿಯ ಪಾರಿವಾಳಗಳು ಗಾಳಿಯಲ್ಲಿ ಹಾರಿದುವು. ಮಕ್ಕಳ ಆಟ, ಪಾಟ, ನೃತ್ಯ, ನಡಿಗೆಗಳನ್ನು ಕಂಡು ನೆಹರು ಎರಡು ಗಂಟೆ ಕಳೆದರು. ಮಕ್ಕಳಿಗೆ ಉತ್ಸಾಹದ ದಿನವದು.

ಶಿವಮೊಗ್ಗೆಯಬಳಿ ತುಂಗಭದ್ರಾ ಸಕ್ಕರೆ ಕಾರಖಾನೆ ಪ್ರಾರಂಭವಾಗಲಿದೆ. ಅದರ ಕಟ್ಟಡಗಳ ಶಂಕು ಶಿಲಾಸ್ಥಾಪನೆ ಕಳೆದ ನವೆಂಬರ್ 1 ರಂದು ಮೈಸೂರು ಮುಖ್ಯ ಮಂತ್ರಿ ಶ್ರೀ ಕೆ. ಹನುಮಂತಯ್ಯನವರ ಹಸ್ತ ದಿಂದ ನೆರವೇರಿತು.

*   *   *

ಸಂಯುಕ್ತ ಸಂಸ್ಥಾನದ ಬಾಲ್ಟಿ ಮೋರ ದಲ್ಲಿಯ ಎಂಗ್ಲ್ಯಂಡರ್ ಕಂಪೆನಿ ಬರಿಯ ಪ್ಲಾಸ್ಟಿಕ್‌ನಿಂದ ಕಟ್ಟಿದ ಅತೀ ದೊಡ್ಡ ಹಡಗನ್ನು ಇತ್ತೀಚೆಗೆ ನೀರಿಗೆ ಇಳಿಸಿದೆ. ಆ ಹಡಗದ ಭಾರ 10 ಟನ್. ಉದ್ದ 51 ಪೂಟು. 165 ಅಶ್ವ ಶಕ್ತಿಯ ಎರಡು ಡಿಜೇಲ್ ಇಂಜಿನ್ನುಗಳನ್ನು ಅದಕ್ಕೆ ಜೋಡಿಸಿದ್ದಾರೆ. ಅದು 100 ಟನ್ ಭಾರ ಹೊರಬಲ್ಲದ್ದು.

*   *   *

ಭಾರತದ ವಿದ್ಯಾವಿಭಾಗದವರು ಏರ್ಪಡಿ ಸಿದ ಅಂತರ್ವಿಶ್ವವಿದ್ಯಾಲಯ ಯುವ ಜನೋತ್ಸವಕ್ಕೆ ದೇಶದೊಳಗಿನ ಬೇರೆ ಬೇರೆ ವಿಶ್ವವಿದ್ಯಾಲಯಗಳ ವಿದ್ಯಾರ್ಥಿಗಳು ಮುನ್ನೂರಕ್ಕೂ ಮಿಕ್ಕಿ ಢಿಲ್ಲಿಯಲ್ಲಿ ಕೂಡಿ ದ್ದರು. ವಿದ್ಯಾರ್ಥಿಗಳ ಅಭಿರುಚಿಗಳನ್ನು ಅರಿತು ಅವರ ಕಲೆಗಳಿಗೆ ಉತ್ತೇಜನ ಕೊಡು ವುದಕ್ಕೆ ಹೀಗೆ ಪ್ರಯತ್ನಿಸಲಾಗುವುದು.



# ಚಿತ್ರ ಕಥೆ



ವಾಸು ಮತ್ತು ಗೋಪಿಯರು ರಜೆಯದಿನ ಊರ ಹೊರಗೆ ಹಸಿರುಗಾವಲಲ್ಲಿ ಹರಟೆ ಹೊಡೆಯುತ್ತ ಕುಳಿತಿದ್ದರು. 'ಟೈಗರ್' ನಾಯಿ ಅಲ್ಲಿ ಹಾರಾಡುತಿದ್ದ ಪತಂಗದೊಂದಿಗೆ ಆಡುತಿತ್ತು. "ವಾಸೂ, ನಾನು ಈ ಕೈವಸ್ತ್ರದಿಂದ ಆ ಪತಂಗವನ್ನು ಹಿಡಿಯುತ್ತೇನೆ. ನಾಳೆ ಶಾಲೆಯಲ್ಲಿ ಎಲ್ಲರಿಗೂ ತೋರಿಸುವಾ" ಎಂದು ಎದ್ದ ಗೋಪಿ.



ಪತಂಗ ಹಾರುತಿರುವಾಗ ಅದರೊಂದಿಗೆ ಗೋಪಿಯೂ ಹಾರುತ್ತ ಕೂಗುತ್ತ ಹೋದ. ಅದು ಹತ್ತಿರ ಕಂಡಂತೆ ಕಾಣಿಸಿ ದೂರದೂರ ಹೋಯಿತು. ಗೋಪಿಯೂ ಅದರೊಂದಿಗೇ ಕುಪ್ಪಳಿಸಿಕೊಂಡು ಮೇಲೆ ನೋಡುತ್ತಾ ಓಡಿದ. ಓಡಿ ಬಿದ್ದುಬಿಟ್ಟ ನೀರ ಹೊಂಡಕ್ಕೆ. ಪತಂಗ ಮಾತ್ರ ಹಾರಿಯೇ ಹೋಯಿತು.

Printed by B. NAGI REDDI at the B. N. K. Press Ltd., Madras 26, and Published by him for Chandamama Publications, Madras 26. Controlling Editor: SRI 'CHAKRAPANI'

Photo by P. S. Khambata



ಬಹುಮಾನ ಪಡೆದ ಶೀರ್ಷಿಕೆ

ನನ್ನೊಡನೇ ಯೋಚಿಸುವೆ

ಕಳಿಸಿದವರು:
ಜಿ. ಎಸ್. ಕೃಷ್ಣನ್

